ಶ್ರೀಃ

# ಆಚಾರ್ಯೋಪಾಸನಮ್

55630

ಅನುವಾದಕರು :
**ವೇದಭೂಷಣ ಎ. ಅನಂತನರಸಿಂಹಾಚಾರ್, ಎಮ್.ಎ.,**
ಸಂಸ್ಕೃತ ಉಪನ್ಯಾಸಕರು
ಎ. ಪಿ. ಎಸ್. ವಾಣಿಜ್ಯ ಕಾಲೇಜು-ಬೆಂಗಳೂರು.

ಅನಂತ ಪ್ರಕಾಶನ

*The Author and Publisher of
this book is ever greatful to
The Editor, T. T. Devasthanams,
who has helped for the
Publication of this book by
sanctioning the financial Aid.*

ಶ್ರೀಃ

# ಆಚಾರ್ಯೋಪಾಸನಮ್

ಅನುವಾದಕರು :
ವೇದಭೂಷಣ ಎ. ಅನಂತನರಸಿಂಹಾಚಾರ್, ಎಮ್.ಎ.,
ಸಂಸ್ಕೃತ ಉಪನ್ಯಾಸಕರು
ಎ.ಪಿ.ಎಸ್. ವಾಣಿಜ್ಯ ಕಾಲೇಜು-ಬೆಂಗಳೂರು.

ಅನಂತ ಪ್ರಕಾಶನ

ĀCĀRYOPĀSANAM

(Original Sanskrit verses with Kannada Translation and Commentary in Kannada Script)

Pages 78+4+4=86

First Edition : 1991

Copies : 1000

Price : Rs. 7/-



*Printed by* :
Sri Lakshmi Printing Works
Gandhi Bazaar, Bangalore-560 004

Published by
ANANTHA PRAKASANA
No. 33, II Cross, Samirapuram
Bangalore-560 018

# ॥ ಅರ್ಪಣೆ ॥



ದಾಸನ ಜನ್ಮದಾತರೂ, ಬ್ರಹ್ಮೋಪದೇಷ್ಟೃವೂ, ಪರಿಪೂರ್ಣವಾಗಿ ವೇದಾಧ್ಯಯನ ಮಾಡಿಸಿದ ಗುರುಗಳೂ, ಈ ಪುಸ್ತಕವಲ್ಲಿ ಬಂದಿರುವ ಶ್ರೀಮದ್ವೇದಾಂತ ದೇಶಿಕರ ಸ್ತೋತ್ರಗಳ ಉಪದೇಷ್ಟವೂ ಆದ, ದಾಸನ ಪಿತೃವರ್ಯರಾದ, ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯರಾದ, ಉಭಯವೇದಾಂತ ಪ್ರವರ್ತಕರಾದ, ಪರಮಾತ್ಮನ – ಲೀಲಾ ವಿಭೂತಿಯಲ್ಲಿ (ಕ್ರಿ.ಶ. ೧೯೧೪ ರಿಂದ ೧೯೮೭) ೭೩ ವರ್ಷಗಳ ಕಾಲ ಅವತರಿಸಿದ್ದು ನಿತ್ಯಕರ್ಮಾನುಷ್ಠಾನಸಂಪನ್ನರಾಗಿ ಸತ್ಸಂಪ್ರದಾಯ ನಿರತರಾಗಿ ಅನೇಕ ಶಿಷ್ಯರುಗಳಿಗೆ ವೇದಾಧ್ಯಯನಮಾಡಿಸಿ, "ವೈದಿಕಾಚಾರ್ಯ", "ವೇದ-ವಾರಿಧಿ", "ಘನಪಾಠಿ", ಎಂಬ ಬಿರುದಾಂಕಿತರಾಗಿ ಬಿಜಯಮಾಡಿಸಿದ್ದ ನಂಸಿಂಹಪುರಂ ವಾಧ್ಯಾರ್. ಸ್ವಚ್ಛಂದಂ ಅನಂತಾಚಾರ್ಯ–ಸ್ವಾಮಿಗಳ ಪದತಲದಲ್ಲಿ ಈ ಅನುವಾದ ಗ್ರಂಥಕುಸುಮವು ದಾಸನಿಂದ ಭಕ್ತಿಪುರಸ್ಸರ–ವಾಗಿ ಸಮರ್ಪಿತವಾಗಿದೆ.

ಶ್ರೀಃ

॥ ಶ್ರೀಮತೇ ರಾಮಾನುಜಾಯ ನಮಃ ॥

॥ ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥

[ಶ್ರೀಮದ್ವೇದಮಾರ್ಗಪ್ರತಿಷ್ಠಾಪನಾಚಾರ್ಯರಾದ, ಪರಮಹಂಸ-ಪರಿವ್ರಾಜಕಾಚಾರ್ಯರಾದ, ಶ್ರೀಮನ್ನಿಗಮಾಂತಮಹಾದೇಶಿಕರ ಸತ್ಸಂ-ಪ್ರದಾಯಪ್ರವರ್ತಕರಾದ ಶ್ರೀಮಚ್ಛ್ರೀರಂಗಪ್ರಿಯ ಮಹಾದೇಶಿಕನ್‌ರವರ ಅನುಗ್ರಹಲೇಖನ : ]

ಶ್ರೀ॥ ಉ॥ ವೇ॥ ವಿದ್ವಾನ್ ಅನಂತನರಸಿಹ್ಮಾಚಾರ್ಯರು ಆಚಾರ್ಯ-ಭಕ್ತರ ಆತ್ಮೋಜ್ಜೀವನಕ್ಕಾಗಿ ಪ್ರಕಾಶಪಡಿಸುತ್ತಿರುವ ಈ ಪವಿತ್ರವೂ ಮಂಗಲವೂ ಆಗಿರುವ ಶ್ರೀಮದಾಚಾರ್ಯಸ್ತುತಿರತ್ನಮಾಲಾಕೋಶಕ್ಕೆ ಅನುಗ್ರಹಪೂರ್ಣರಾದ ಶ್ರೀಮದಾಚಾರ್ಯರ ಮತ್ತು ಕೃತಜ್ಞತಾಪೂರ್ಣರಾದ ಭಕ್ತಶ್ರೇಷ್ಠರ ಮಂಗಳಾಶಂಸನೆಯ ಕಾಪು ಇರಲೆಂದು ನಾವು ನಾರಾಯಣ ಸ್ಮರಣೆ ಮಾಡುತ್ತೇವೆ.

ಈ ಕೃತಿಯನ್ನಲಂಕರಿಸಿರುವ ಎಲ್ಲ ಸ್ತುತಿರತ್ನಗಳೂ ಆಚಾರ್ಯ-ವರ್ಯರೂ ಭಕ್ತವರೇಣ್ಯರೂ ವಿದ್ವದಗ್ರಣ್ಯರೂ ಕವಿಪುಂಗವರೂ ವಿಶಿಷ್ಟಾ-ದ್ವೈತ ಸಿದ್ಧಾಂತ ಸಂರಕ್ಷಣ ಸಂವರ್ಧನವಿಚಕ್ಷಣರೂ ಆಗಿ ಭಾರತಭೂಮಿ-ಯನ್ನು ತಮ್ಮ ಅವತಾರದಿಂದ ಬೆಳಸಿದ್ದ (ಕ್ರಿ. ಶ. 1268-1369) ಪರಿ-ಪೂರ್ಣಜೀವಿ ಸರ್ವತಂತ್ರ ಸ್ವತಂತ್ರೋಭಯವೇದಾಂತಾಚಾರ್ಯ ಕವಿತಾ-ರ್ಕಿಕಸಿಹ್ಮ ಪದವಿಭೂಷಿತ ವಿಷ್ಣುಘಂಟಾವತಾರ ವೇಂಕಟನಾಥ ವೇದಾಂತ ಮಹಾದೇಶಿಕರನ್ನು ಕುರಿತಿದ್ದು ಅವರ ಅಡಿದಾವರೆಗಳಲ್ಲಿ ಅರ್ಪಿತವಾಗಿ ಕೃತ-ಕೃತ್ಯವಾಗಿವೆ. ಅವರ ದಿವ್ಯಮಂಗಳ ವಿಗ್ರಹದ ಧ್ಯಾನ, ಮಂಗಳಾಶಂಸನೆ, ಪ್ರಾರ್ಥನೆಯ ರೂಪವಾದ ಸ್ತುತಿಗಳು ಮತ್ತು ಅವರ ಗುಣವೈಭವ-ಗಳ ಉಜ್ವಲ ಮಣಿದರ್ಪಣವಾಗಿರುವ ಅರ್ಚನೆಯ ನಾಮಾವಳಿ-ಎಲ್ಲವೂ

ಅತ್ಯಂತ ರಮಣೀಯವಾಗಿವೆ. ಆಚಾರ್ಯ ನಿಷ್ಠೆಯು ಪರಾಕಾಷ್ಠೆಯನ್ನು ಮುಟ್ಟಿರುವುದು ಮಾತ್ರವಲ್ಲದೆ ಅತ್ಯವಶ್ಯವಾದ ಆತ್ಮೀಯತೆಯಿಂದಲೂ ತುಂಬಿವೆ. ಕಾರಣ – ಆ ಸ್ತುತಿಗಳನ್ನು ರಚಿಸಿದವರು "**ಆತ್ಮಾವೈಪುತ್ರನಾ–ಮಾಸಿ**" "**ಪಿತುಶ್ಶತಗುಣಂಪುತ್ರಃ**" ಇತ್ಯಾದಿ ಶ್ರೀಸೂಕ್ತಗಳು ಹೇಳುವಂತೆ ಆ ಮಹಾದೇಶಿಕರ ಆತ್ಮೀಯ ಜ್ಞಾನಪುತ್ರರೂ ಔರಸಪುತ್ರರೂ ಆಧ್ಯಾತ್ಮ ಸಂಪತ್ತಿನ ಉತ್ತರಾಧಿಕಾರಿಗಳೂ ಆಗಿ ಅವರನ್ನೂ ತಂದೆಯೆಂದೂ ಬ್ರಹ್ಮೋಪ–ದೇಶಕನೆಂದೂ ಗುರುವೆಂದೂ ಪರದೈವವೆಂದೂ ಪರಮೋಪಾಯವೆಂದೂ ಪರಮೋಪೇಯವೆಂದೂ ಸರ್ವಸ್ವವೆಂದೂ ತಿಳಿದು ಆರಾಧಿಸುತ್ತಿದ್ದ ವಿಶ್ವಾಮಿತ್ರ–ಕುಲತಿಲಕ ವಿದ್ವನ್ಮಣಿ ಭಕ್ತಪ್ರವರ ಶ್ರೀಮನ್ನಯಿನಾರಾಚಾರ್ಯಕುಮಾರ–ವರದಾಚಾರ್ಯರು.

ವಿದ್ಯಾವಿನಯಸಂಪನ್ನರೂ ಶ್ರೀಮದಾಚಾರ್ಯಸತ್ ಸಂಪ್ರದಾಯ–ಪರಾಯಣರೂ ಆಗಿರುವ ಗ್ರಂಥ ಸಂಪಾದಕರು ಆ ದಿವ್ಯಸ್ತೋತ್ರಗಳ ಜೊತೆಗೆ ಅವುಗಳ ಅರ್ಥವು ಎಲ್ಲರಿಗೂ ಮನವರಿಕೆಯಾಗುವುದಕ್ಕೋಸ್ಕರ ಇಲ್ಲಿ ಮಂಡಿ–ಸಿರುವ ಪ್ರತಿಪದಾರ್ಥ ಮತ್ತು ಭಾವಾರ್ಥ ವಿವರಣೆಗಳು ರತ್ನಗಳಲ್ಲಿ ರಂಧ್ರ–ವನ್ನು ಕೊರೆದು ಪೋಣಿಸಿರುವ ಸ್ವರ್ಣಸೂತ್ರದ ಕೆಲಸವನ್ನು ಸುಂದರವಾಗಿ ನಿರ್ವಹಣೆಮಾಡಿವೆ. ಗ್ರಂಥಕ್ಕೆ ಅವರು ಬರೆದಿರುವ ಮುನ್ನುಡಿಯೂ ವೈದುಷ್ಯಪೂರ್ಣವಾಗಿದೆ. ಅವರು ಅದರಲ್ಲಿ ವಿಶೇಷವಾಗಿ ಅಳವಡಿಸಿರುವ ಆಚಾರ್ಯಮಹಿಮೆಯ ಅಗ್ಗಳಿಕೆಯ ನಿರೂಪಣೆ ಅತ್ಯಾವಶ್ಯವಾಗಿದೆ. ಆಚಾರ್ಯನು ಅಂಧಕಾರನಿವರ್ತಕನಾಗಿ, ಪಾಪವಿಧ್ವಂಸಕನಾಗಿ, ದಿವ್ಯ ದೃಷ್ಟಿಸಂಪನ್ನನಾಗಿ, ಆತ್ಮಸಾಮ್ಯವನ್ನು ಉಂಟುಮಾಡುವವನಾಗಿ, ಕಾರುಣ್ಯ ಪರಿಪೂರ್ಣನಾಗಿ, ಆನಂದ ಪರಿಪೂರ್ಣನಾಗಿ, ನಿತ್ಯಶೇಷಿಯೋಗವುಳ್ಳವನಾಗಿ ಉಪಾಸ್ಯನಾಗಿರುವುದರಿಂದ ಭಗವತ್ ಸ್ಥಾನಾಪನ್ನನೇ ಆಗಿದ್ದಾನೆ. "**ದೇವಮಿ–ವಾಚಾರ್ಯಮುಪಾಸೀತ**" "**ಆಚಾರ್ಯಸ್ಸಹರಿಸ್ಸಾಕ್ಷಾತ್**" "**ಯಸ್ಯ–ದೇವೇ ಪರಾಭಕ್ತಿರ್ಯಥಾ ದೇವೇತಥಗುರೌ**" "**ಸಂಪ್ರಾಪ್ತಸದ್ಗುರು–ತನೋಸ್ಸಮಯೇ ದಯಾಲೋಃ**" ಇತ್ಯಾದಿ ಶಾಸ್ತ್ರವಚನಗಳು ಇದನ್ನು

ಪ್ರಮಾಣಿಸುತ್ತವೆ. ಇಷ್ಟೇ ಅಲ್ಲ, ಆತನು ಭಕ್ತಾನುಗ್ರಹದಲ್ಲಿ ಭಗವಂತ-ನಿಗಿಂತಲೂ ಒಂದು ಕೈ ಹೆಚ್ಚೇ ಆಗಿದ್ದಾನೆ. ಏಕೆಂದರೆ ಭಗವಂತನ ನೇರವಾದ ಅವತಾರಗಳಲ್ಲಿ ನಿಗ್ರಹ, ಅನುಗ್ರಹ ಎರಡೂ ಜನಸಾಮಾನ್ಯರಿಗೆ ಕಂಡುಬರು-ತ್ತವೆ. ಆಚಾರ್ಯಾವತಾರವಲ್ಲಾದರೋ ಕೇವಲ ಅನುಗ್ರಹವೇ ತುಂಬಿ ಕೊಂಡಿರುತ್ತದೆ. ಭಗವಂತನ ಅನಂತ ಕಲ್ಯಾಣಗುಣಗಳಲ್ಲಿ ಸೌಶೀಲ್ಯ ಸೌಲಭ್ಯ ಮತ್ತು ಕಾರುಣ್ಯಗಳು ಇಲ್ಲಿಯೂ ಎದ್ದು ಕಾಣುತ್ತವೆ. ನಮ್ಮ ದೋಷಗಳನ್ನು ಮರೆಮಾಡಿ 'ಇವನು ಅಕಿಂಚನ, ಅನನ್ಯಗತಿಕ, ಆಶ್ರಿತ' ಎಂದು ಗುಣಭಾಗವನ್ನೇ ಅವನಲ್ಲಿ ಅರಿಕೆಮಾಡಿ ಅವನ ಕೃಪೆಗೆ ಪಾತ್ರರನ್ನಾಗಿಸಿ ಉದ್ಧಾರಮಾಡಿಸುವವನು ಆಚಾರ್ಯ. ಭಗವಂತನು ಕರುಣೆಯ ಸಮುದ್ರ-ವಾದರೆ ಆಳ್ವಾರುಗಳು ಮತ್ತು ಆಚಾರ್ಯರು ಆ ಸಮುದ್ರಜಲದ ಶುದ್ಧ-ವಾದ ಆವಿಯಿಂದ ಘನೀಭೂತವಾದ ಮೋಡದಂತೆ, ಮಳೆಯಂತೆ, ಝರಿಗಳಂತೆ, ಕೆರೆಕುಂಟೆ ಕಾಲುವೆ ತೂಬುಗಳಂತೆ, ಸರ್ವದೇಶ ಸರ್ವಕಾಲಗಳ ಜೀವಿಗಳಿಗೂ ಭೋಗ್ಯರೂ ಉಪಜೀವ್ಯರೂ ಆಗಿದ್ದಾರೆ. ಅವರು ಶ್ರೀನಿವಾಸನ ಕರುಣಾ ಸಮುದ್ರದ ತಾಪಪರಿಹಾರಕವಾದ ಪರಮಶೀತಲ ಪರೀವಾಹದ ಪರಂಪರೆಯೇ ಆಗಿದ್ದಾರೆ. ನೀರಿನಲ್ಲಿ ಬೇರೂರಿರುವ ಕಮಲವನ್ನು ಮಾತ್ರವೇ ಸೂರ್ಯನು ಪೋಷಿಸುವಂತೆ ಆಚಾರ್ಯರ ಕೃಪಾತೀರ್ಥದಲ್ಲಿ ನೆಲೆಸಿರುವ ಚೇತನಗಳನ್ನು ಮಾತ್ರವೇ ಭಗವಂತನ ಸಂಕಲ್ಪಸೂರ್ಯನು ಪೋಷಿಸುತ್ತಾನೆ. ಅವನ ಮಹೋಪಕಾರಕ್ಕೆ, ದೇವತೆಗಳೂ ಪ್ರತಿ ನೀಡಲಾರರು. "**ಬ್ರಹ್ಮವಿದ್ಯಾ-ಪ್ರದಾನಸ್ಯ ದೇವೈರಪಿ ನ ಶಕ್ಯತೇ ಪ್ರತಿಪ್ರದಾನಂ**". ಅವರ ಧ್ಯಾನ, ಸ್ತುತಿ, ಮಹಿಮೆಯ ಪ್ರಕಾಶನ ಮತ್ತು ಸಿದ್ಧಾಂತದ ಪ್ರಚಾರ ಇಷ್ಟುಮಾತ್ರವೇ ನಾವು ಅವನಿಗೆ ಸಲ್ಲಿಸಬಹುದಾದ ಯತ್ಕಿಂಚಿತ್ ಕಾಣಿಕೆ. ಅಂಥಾ ಕಾಣಿಕೆಯನ್ನು ಈ ಶ್ರೀಕೋಶವು ಸಲ್ಲಿಸಲು ನಿಸ್ಸಂಶಯ ವಾಗಿಯೂ ಸಹಾಯಮಾಡುತ್ತದೆ.

ಶ್ರೀಮದಾಚಾರ್ಯ ನಿಗಮಾಂತಮಹಾದೇಶಿಕರು ಭಗವಂತನ ದಿವ್ಯ ಘಂಟೆಯ ವಿಭವಾವತಾರವಾಗಿ ಬೆಳಗಿದವರು. ಅವನ ವೈಭವವನ್ನು ಘಣೀರೆಂದು ಘಂಟಾಪಥದಲ್ಲಿ ಮೊಳಗಿದ ಮಹಾನುಭಾವರು. ವಿಶೇಷವಾದ

ಭವ(ಜನ್ಮ)ವನ್ನು ತಳೆದು ಬಂದುದರಿಂದಲೂ ಅವರು ವಿಭವರು. ಅವರ ಅವತಾರದ ಸಂವತ್ಸರವೂ ವಿಭವವೇ. ವಿಭವ ಸಂವತ್ಸರದಲ್ಲಿ ಇದೆಲ್ಲದರ ಕುರುಹಾಗಿ ರಚಿತವಾಗಿರುವ ಈ ಶ್ರೀಕೋಶವು ಸರ್ವಾರ್ಥದಿಂದಲೂ ಶ್ರೀಮದಾಚಾರ್ಯ ವಿಭವ ಪ್ರಕಾಶಕವಾಗಲಿ ಎಂದು ಉಭಯ ವಿಭವ ಪ್ರಭುವಾದ ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇವೆ.

ಕನ್ಯಾಶ್ವಯುಜಶುಕ್ಲಶ್ರವಣಯೋಗಸಂಪನ್ನ
ಶ್ರೀ ವಿಜಯದಶಮೀ
10-10-1989.

ಇತಿ
ನಾರಾಯಣ ಸ್ಮರಣಪೂರ್ವಕ,
ರಂಗಪ್ರಿಯ

॥ ಕೃತಜ್ಞತೆ ॥

ಶ್ರೀ ಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯರಾದ, ಪರಮಹಂಸ ಪರಿವ್ರಾಜಕಾಚಾರ್ಯರಾದ ಶ್ರೀಮನ್ನಿಗಮಾಂತ ಮಹಾದೇಶಿಕರ ಸತ್ಸಂಪ್ರದಾಯ ಪ್ರವರ್ತಕರಾದ ಶ್ರೀಮಚ್ಛ್ರೀರಂಗಪ್ರಿಯ ಮಹಾದೇಶಿಕನ್‌ರವರು ದಾಸನ ವಿಷಯದಲ್ಲಿ ಕೃಪಾಪೂರಿತರಾಗಿ ದಾಸನ ಈ ಗ್ರಂಥಕ್ಕೆ ಅನುಗ್ರಹ ಲೇಖನವನ್ನು ಬರೆದುಕೊಟ್ಟು ಉಪಕರಿಸಿದ್ದಾರೆ. ದಾಸನು ಅವರಿಗೆ ಚಿರಋಣಿಯಾಗಿದ್ದಾನೆ. ಹಾಗೆಯೇ ಈ ಗ್ರಂಥವನ್ನು ಬಹಳ ಶ್ರಮದಿಂದ ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟಿರುವ ದಾಸನ ಸ್ನೇಹಿತರಾದ, **ಶ್ರೀಲಕ್ಷ್ಮೀ ಪ್ರಿಂಟರ್ಸ್‌**ನ ಮಾಲಿಕರಾದ ಶ್ರೀಮಾನ್ ಶೇಷಾದ್ರಿಯವರಿಗೂ ಮತ್ತು ಅವರ ಸಹೋದ್ಯೋಗಿಗಳಿಗೂ ದಾಸನು ಚಿರಋಣಿಯಾಗಿದ್ದಾನೆ.

ಇತಿ ಸಜ್ಜನವಿಧೇಯ
**ಎ. ಅನಂತನರಸಿಂಹಾಚಾರ್**

॥ ಇತಿ ಶಮ್ ॥

# ಮುನ್ನುಡಿ

|| ಶ್ರೀಮತೇ ಶ್ರೀಗೋಪಾಲದೇಶಿಕಮಹಾದೇಶಿಕಾಯ ನಮಃ ||
|| ಶ್ರೀಮತೇ ಶ್ರೀನಿವಾಸಮಹಾದೇಶಿಕಾಯ ನಮಃ ||
|| ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ||

ಚಿತ್, ಅಚಿತ್, ಈಶ್ವರ—ಎಂದು ತತ್ತ್ವವು ಮೂರು ವಿಧವಾಗಿರುತ್ತವೆ. 'ಚಿತ್'-ಎಂದರೆ ಜೀವಾತ್ಮರು. ಇವರು ಮೂರು ವಿಧವಾಗಿರುತ್ತಾರೆ. ನಿತ್ಯಾತ್ಮರು, ಮುಕ್ತಾತ್ಮರು ಮತ್ತು ಬದ್ಧರು. ಅನಾದಿ ಕರ್ಮಬಂಧದಿಂದ ಬದ್ಧರಾಗಿ ಜನ್ಮಮರಣ ಚಕ್ರದಲ್ಲಿ ಸಿಲುಕಿಕೊಂಡು ಸಂಸಾರ ಸಾಗರದಲ್ಲಿರುವ ಚೇತನರೇ-ಬದ್ಧರು. ಮೊದಲು ಬದ್ಧರಾಗಿದ್ದು ಕರ್ಮಯೋಗ, ಜ್ಞಾನ ಯೋಗ ಸಹಕೃತವಾದ ಭಕ್ತಿಯೋಗದಿಂದಲೋ ಅಥವಾ ಶರಣಾಗತಿಯ ಅನುಷ್ಠಾನದಿಂದಲೋ ಕರ್ಮಬಂಧವನ್ನು ನೀಗಿ, ಪರಮಾತ್ಮನನ್ನು ಸೇರಿ, ಮತ್ತೆಂದೂ ಸಂಸಾರಸಾಗರದಲ್ಲಿ ಬರದಂತಿದ್ದು ಶ್ರೀವೈಕುಂಠದಲ್ಲಿ ಪರಬ್ರಹ್ಮನನ್ನನುಭವಿಸುತ್ತಾ ಪರಿಪೂರ್ಣಬ್ರಹ್ಮಾನಂದಾನುಭವಮಾಡುತ್ತಿರುವ ಚೇತನರೇ—ಮುಕ್ತಾತ್ಮರು. ಎಂದೂ ಕರ್ಮಬಂಧನಕ್ಕೇ ಒಳಗಾಗದೇ, ಶ್ರೀವೈಕುಂಠದಲ್ಲಿದ್ದು ಪರಮಾತ್ಮನ ಕೈಂಕರ್ಯ ಮಾಡುತ್ತಾ ಪರಿಪೂರ್ಣ ಬ್ರಹ್ಮಾನಂದಾನುಭವವನ್ನು ಮಾಡುತ್ತಿರುವವರೇ—ನಿತ್ಯಾತ್ಮರು. ಪರಮಾತ್ಮನಂತೆಯೇ ಕೆಲವುವೇಳೆ ಚೇತನೋದ್ಧಾರ ಕಾರ್ಯಕ್ಕಾಗಿ ಪರಮಾತ್ಮನಿಂದ ಆಜ್ಞಾಪಿಸಲ್ಪಟ್ಟು ಬದ್ಧಚೇತನರ ನಡುವೇ ಈ ನಿತ್ಯಾತ್ಮರೂ ಅವತರಿಸುವು-ದುಂಟು. ಇವರು ಅವತಾರದೆಶೆಯಲ್ಲಿ, ನಮ್ಮಕಣ್ಣುಗಳಿಗೆ ನೋಡಲು ನಮ್ಮಂತೆಯೇ ದೇಹವನ್ನು ಹೊಂದಿದ್ದರೂ, ಇವರು ಬದ್ಧಚೇತನರಂತೆ ಕರ್ಮಜನ್ಯವಾದ ಶರೀರಹೊಂದಿರುವುದಿಲ್ಲ. ಯಾವಾಗಲೂ ಪರಬ್ರಹ್ಮಾನು-ಭವದಲ್ಲಿಯೇ ಇದ್ದು, ಮಧ್ಯದಲ್ಲಿ ಚೇತನೋದ್ಧಾರಕೆಲಸಗಳನ್ನೂ ನಡೆ-ಯಿಸುತ್ತಾರೆ. ಈ ರೀತಿ ಅವತರಿಸಿದವರೇ ಆಳ್ವಾರ್ರುಗಳೂ, ಭಗವ-ದ್ರಾಮಾನುಜರು, ವೇದಾಂತದೇಶಿಕರೇ ಮೊದಲಾದ ಆಚಾರ್ಯರುಗಳು. 'ಅಚಿತ್'—ಎಂಬುದೇ ಜಡಪ್ರಕೃತಿ. ಇದು ೩ಳ ವಿಧವಾಗಿರುತ್ತದೆ. ಇವುಗಳ

ಸಮ್ಮಿಶ್ರಣದಿಂದಲೇ ಪರಮಾತ್ಮನು ವಿಶ್ವವನ್ನು ಸೃಷ್ಟಿಸಿರುವುದು. ಪ್ರತಿಯೊಬ್ಬ ಬದ್ಧಚೇತನನ ದೇಹವೂ ಇದರಿಂದಲೇ ಸೃಷ್ಟವಾಗಿದೆ. ಬದ್ಧ-ಚೇತನರಿಗೂ ಈ ಪ್ರಕೃತಿಗೂ ಸಂಬಂಧವೇರ್ಪಡುವುದೇ ಸೃಷ್ಟಿ. ಇದರಿಂದ ಚೇತನರು ತಮ್ಮ ಅನಾದಿಯಾದ ಕರ್ಮದಿಂದ ಜನ್ಮ ಮರಣಚಕ್ರದಲ್ಲಿ ಸಿಲುಕಿಕೊಂಡು ತೊಳಲುತ್ತಿರುವುದೇ— ಸ್ಥಿತಿ. ಬದ್ಧ ಚೇತನರಿಗೆ ಅವರವರ ಕರ್ಮವು ಪೂರ್ಣವಾಗಿ ಸವೆಯದಿದ್ದರೂ ಈ ಪ್ರಕೃತಿಯಿಂದ ಬೇರ್ಪಡುವುದೇ —'ಪ್ರಲಯ' ಅಥವಾ 'ಲಯ'. ಪ್ರಲಯದಶೆಯಲ್ಲಿ ಈ ಪ್ರಕೃತಿಯನ್ನೂ ಮತ್ತು ಬದ್ಧಚೇತನರನ್ನೂ ಪರಮಾತ್ಮನು ತನ್ನ ಉದರದಲ್ಲಿ ಅಡಗಿಸಿಟ್ಟು ಕೊಂಡಿರುತ್ತಾನೆ. ಲೋಕದಲ್ಲಿ ಜೇಡರಹುಳುವು, ಸ್ವೇಚ್ಛೆಯಿಂದ, ತನ್ನ ಲಾಲಾರಸದಿಂದಲೇ ಬಲೆಯನ್ನು ಕಟ್ಟಿ ತಾನೂ ಅದರಲ್ಲಿದ್ದು, ತನಗೆ ಬೇಡ ವೆಂದಾಗ ಅದನ್ನು ಮತ್ತೆ ತನ್ನಲ್ಲಿಯೇ ಅಡಗಿಸಿ ಕೊಳ್ಳುವಂತೆಯೇ, ಪರಮಾತ್ಮನೂ ತನ್ನ ಸಂಕಲ್ಪದಿಂದಲೇ ಈ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುತ್ತಲಿರುತ್ತಾನೆ. ಈ ಚೇತನಗಳೆಲ್ಲದರಲ್ಲಿಯೂ, ಅಂತರ್ಯಾಮಿಯಾ-ಗಿದ್ದು ಎಲ್ಲರನ್ನೂ ರಕ್ಷಿಸುವವನೇ-'ಈಶ್ವರ'-'ಪರಬ್ರಹ್ಮ'. ಯಾವ ಒಂದು ವಿಕಾರಕ್ಕೂ ಒಳಗಾಗದಿರುವ, ನಿತ್ಯಾತ್ಮರೂ ಮತ್ತು ಮುಕ್ತಾತ್ಮರೂ ಬ್ರಹ್ಮಾ-ನಂದಾನುಭವ ಮಾಡುತ್ತಿರುವ ಸ್ಥಳವೇ — 'ಶ್ರೀವೈಕುಂಠ' ಅಥವಾ 'ನಿತ್ಯವಿಭೂತಿ'. ಪರಮಾತ್ಮನಿಂದ ಅವನ ಲೀಲೆಗೋಸ್ಕರವಾಗಿ ಸೃಷ್ಟವಾಗುವ ವಿಶ್ವವೇ —'ಲೀಲಾವಿಭೂತಿ'. ಈ ನಿತ್ಯವಿಭೂತಿ ಮತ್ತು ಲೀಲಾವಿಭೂತಿ ಎರಡಕ್ಕೂ ಪರಮಾತ್ಮನೇ ಪ್ರಭುವಾಗಿದ್ದಾನೆ.

ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾದ ಶ್ರಿಯಃಪತಿ ಶ್ರೀಮನ್ನಾರಾಯಣನು ಪೂರ್ವ ಕಲ್ಪದ ಪ್ರಳಯಕಾಲದಲ್ಲಿ, ಆ ಕಲ್ಪದಲ್ಲಿ ಕರ್ಮಬಂಧದಿಂದ ಮುಕ್ತರಾಗದಿರುವ ಎಲ್ಲ ಚೇತನರನ್ನೂ ಮತ್ತು ಅಚೇತನ ವರ್ಗವನ್ನೂ ತನ್ನ ಉದರದಲ್ಲಿ ಅಡಗಿಸಿಕೊಂಡಿರುತ್ತಾನೆ. ಹೀಗೆ ಇರುವಲ್ಲಿ ಎಂದಾದರೊಂದು ದಿನ, ಅವನಿಗೆ ನಿರ್ಹೇತುಕದಯೆಯುಂಟಾಗಿ, ತನ್ನ ಉದರದಲ್ಲಿರುವ ಚೇತನವರ್ಗವನ್ನು ಕಂಡು, ಆ ಚೇತನರೆಲ್ಲರೂ

ತನ್ನಂತೆಯೇ ಪರಿಪೂರ್ಣ ಆನಂದಕ್ಕೆ ಪಾತ್ರರಾದರೂ, ಕರ್ಮಬಂಧದಿಂದ ಮುಕ್ತರಾಗದಿರುವುದರಿಂದ ಆನಂದವನ್ನನುಭವಿಸದೆ ಇರುವರೆಂದೂ, ಮತ್ತು ಪ್ರಳಯಕಾಲದಲ್ಲಿ ಅವರಿಗೆ ಇಂದ್ರಿಯಾದಿಗಳಿಲ್ಲದಿರುವುದರಿಂದ ಯಾವವಿಧ-ವಾದ ಸುಖದುಃಖಕ್ಕೂ ಪಾತ್ರರಾಗದೆ ಜಡವಸ್ತುವಿನಂತಿರುವುದನ್ನೂ ಕಂಡು, ಅವರ ಮೇಲೆ ವಿಶೇಷಕೃಪೆ ತೋರಿ, ಅವರೆಲ್ಲರೂ ಆನಂದಾನುಭವವನ್ನು ಪಡೆಯಲು ಸಾಧನವಾದ ಇಂದ್ರಿಯಾದಿಗಳನ್ನು ಅವರವರಿಗೆ ಅನುಗ್ರಹಿಸುವ ಸಲುವಾಗಿ ಜಗತ್ ಸೃಷ್ಟಿಯನ್ನೇ ಮಾಡಿದನು. "**ಅಚಿದವಿಶಿಷ್ಟಾನ್ ಪ್ರಲಯೇ ಜಂತೂನವಲೋಕ್ಯ ಜಾತನಿರ್ವೇದ । ಕರಣಕಳೇಬರ-ಯೋಗಂ ವಿತರಸಿ ವೃಷಶೈಲನಾಥ ಕರುಣೇತ್ವಮ್**" ॥ ದಯಾಶತಕ-೧೭ ಈ ಸೃಷ್ಟಿಯಿಂದ ಚೇತನರು ಅವರವರ ಪೂರ್ವಾರ್ಜಿತ ಕರ್ಮಾನುಗುಣ-ವಾದ ದುಃಖ ಮಿಶ್ರಿತವಾದ ಮಿತವಾದ ಆನಂದಾನುಭವವನ್ನು ಮಾಡಲು ಅವಕಾಶವಾಯಿತು. ಮತ್ತೆ ಪರಮಾತ್ಮನು ಈ ಚೇತನವರ್ಗದವರೆಲ್ಲರೂ ಪರಿಪೂರ್ಣ ಆನಂದಾನುಭವವನ್ನು ಮಾಡಲು, ತಡೆಯಾಗಿರುವ ಕರ್ಮಬಂಧ ವನ್ನು ನೀಗುವುದಕ್ಕೆ ಸಾಧನವಾದ ಮಾರ್ಗಗಳನ್ನು ನಮಗೆ ತೋರಿಕೊಡುವ ಜ್ಞಾನರೂಪವಾದ ಶಬ್ದಬ್ರಹ್ಮಮಯವಾದ ವೇದಗಳನ್ನು ಮೊದಲು ಚತುರ್ಮುಖಬ್ರಹ್ಮನಿಗೂ ಮತ್ತೆ ಅವನಿಂದ, ಇತರ ಮಂತ್ರದ್ರಷ್ಟಾರರಾದ ಮಹರ್ಷಿಗಳಿಗೂ, ಮತ್ತೆ ಅವರ ಶಿಷ್ಯ ಪ್ರಶಿಷ್ಯ ಪರಂಪರೆಯಲ್ಲಿ ಅರ್ಹರಾದ ಎಲ್ಲ ಚೇತನವರ್ಗದವರಿಗೂ ಲಭಿಸುವಂತೆ ಉಪದೇಶಿಸಿ ಅನುಗ್ರಹಿಸಿದನು. ಕಾಲಾನುಗುಣವಾಗಿ, ವೇದಮಂತ್ರಗಳಿಗೂ ಅಪಾರ್ಥವನ್ನು ಕಲ್ಪಿಸುವುದೇ ಮೊದಲಾಗಿ ಅಧರ್ಮತಲೆದೋರಿ, ತನ್ನ ಭಕ್ತರಿಗೆ ತೊಂದರೆಗಳುಂಟಾಗಿ, ದುಷ್ಟರ ಪ್ರಾಬಲ್ಯವುಂಟಾದಾಗ, ಶಿಷ್ಟರನ್ನು ರಕ್ಷಿಸಲೂ ಮತ್ತು ಧರ್ಮ ಸಂಸ್ಥಾಪನೆಮಾಡಲು ಸ್ವತಃ ತಾನೇ ರಾಮಕೃಷ್ಣಾದ್ಯವತಾರಗಳನ್ನು ಮಾಡುತ್ತಾನೆ. "**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ । ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ** ॥(ಭಗವದ್ಗೀತಾ) **ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ಧರ್ಮ ಸಂಸ್ಥಾಪನಾರ್ಥಾಯ- ಸಂಭವಾಮಿ ಯುಗೇ ಯುಗೇ**" ॥ (ಭಗವದ್ಗೀತಾ)

ಕೇಲವು ವೇಳೆಯಲ್ಲಿ ಮೇಲಿನ ಕಾರಣದಿಂದಲೇ ತಾನೇ ಆಚಾರ್ಯರುಗಳ ರೂಪದಲ್ಲಿ ಅವತರಿಸಿ, ವೇದ ಮಂತ್ರಾರ್ಥಗಳ ನಿಷ್ಕೃಷ್ಟಾರ್ಥಗಳನ್ನು ಬೋಧಿಸುವ ಸಲುವಾಗಿ ಶಾಸ್ತ್ರಗ್ರಂಥಗಳನ್ನು ನಿರ್ಮಾಣಮಾಡಿ ಚೇತ ನೋದ್ಧಾರವನ್ನೂ ಮಾಡುತ್ತಾನೆ. "ಸಾಕ್ಷಾನ್ನಾರಾಯಣೋದೇವಃ ಕೃತ್ವಾ ಮರ್ತ್ಯಮಯೀಂ ತನುಂ । ಮಗ್ನಾನುದ್ಧರತೇ ಲೋಕಾತ್ ಕಾರುಣ್ಯಾತ್ ಶಾಸ್ತ್ರಪಾಣಿನಾ." ||

ಈ ರೀತಿ ಪರಮಾತ್ಮನು ಮಾಡುವ ವಿಭವಾವತಾರ ವೆಂದು ಹೇಳಲಾಗುವ ರಾಮಕೃಷ್ಣಾದ್ಯವತಾರ ಮತ್ತು ಆಚಾರ್ಯರೂಪ ಅವತಾರಗಳಲ್ಲಿ, ಆಚಾರ್ಯರೂಪ ಅವತಾರಕ್ಕೆ ವಿಶೇಷವಾದ ಸ್ಥಾನವುಂಟು. ವಿಭವಾವತಾರ ಗಳಲ್ಲಿ ಶಿಷ್ಟರಕ್ಷಣೆ ಮತ್ತು ಧರ್ಮಸಂಸ್ಥಾಪನೆ ಪ್ರಧಾನವಾದ ಉದ್ದೇಶ್ಯ ವಾದರೂ, ರಾವಣ, ಹಿರಣ್ಯಕಶಿಪು, ಶಿಶುಪಾಲಾದಿ ದುಷ್ಟನಿಗ್ರಹವನ್ನೂ ಮಾಡುತ್ತಾನೆ. ಅಂದರೆ ಪರಮಾತ್ಮನ ಅನುಗ್ರಹ ಮತ್ತು ನಿಗ್ರಹ ಎರಡರ ಶಕ್ತಿಯನ್ನೂ ತೋರುತ್ತಾನೆ. ಆದರೇ ಆಚಾರ್ಯರೂಪ ಅವತಾರಗಳಲ್ಲಿ ಕೇವಲ ಧರ್ಮಸಂಸ್ಥಾಪನೆ ಮತ್ತು ಶಿಷ್ಟರಕ್ಷಣೆಯೇ ನಡೆಯುತ್ತದೆ. ಕೇವಲ ಅನುಗ್ರಹಶಕ್ತಿಯನ್ನು ತೋರುತ್ತಾನೆ. ಪರಮಾತ್ಮನಲ್ಲಿ ಅನಂತವಾದ ಕಲ್ಯಾಣಗುಣಗಳಿದ್ದರೂ, ಪರಮಾತ್ಮನ ಮಹತ್ವ, ಸೌಲಭ್ಯ, ಸೌಶಿಲ್ಯ ಮತ್ತು ದಯಾಗುಣ ವಿಶೇಷವಾಗಿ ಪ್ರಕಾಶಿತವಾಗುವುದು ಆಚಾರ್ಯರೂಪಅವತಾರ-ಗಳಲ್ಲಿಯೇ.

ನಮ್ಮ ಕರ್ಮಬಂಧನವನ್ನು ನೀಗಿ ಪರಮಾತ್ಮನನ್ನು ಸೇರಿ ಪರಿಪೂರ್ಣ ಬ್ರಹ್ಮಾನುಭವವನ್ನು ಪಡೆಯಲು ಪರಮಾತ್ಮನು ವೇದಶಾಸ್ತ್ರಗಳಲ್ಲಿ ತೋರಿಕೊಟ್ಟಿರುವ ಮಾರ್ಗವೆರಡು. ಮೊದಲನೆಯದು ಕರ್ಮಯೋಗ ಜ್ಞಾನ ಯೋಗ ಸಹಕೃತವಾದ ಭಕ್ತಿಯೋಗ. ಎರಡನೆಯದು ಶರಣಾಗತಿ. ಮೊದಲನೆಯ ಮಾರ್ಗಕ್ಕೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಪುರುಷನಾಗಿ ಜನಿಸಿ ಷಡಂಗ ಸಹಿತ ವೇದಾಧ್ಯಯನ ಮಾಡಿದವನು ಮಾತ್ರ ಅಧಿಕಾರಿ

ಯಾಗಬಲ್ಲನು. ಆದರೆ ಜಾತಿ, ವರ್ಣ, ವಯಸ್ಸು ಲಿಂಗಭೇದವಿಲ್ಲದೆ ಎಲ್ಲ ಚೇತನರೂ ಶರಣಾಗತಿಯನ್ನನುಷ್ಠಿಸಲು ಅಧಿಕಾರಿಯಾಗುತ್ತಾರೆ. ಕರ್ಮದ ಸಂಕೋಲೆಯನ್ನು ಬಿಡಿಸಿಕೊಂಡು ಪರಮಾತ್ಮನನ್ನು ಸೇರಬೇಕೆಂಬ ಹಂಬಲವುಳ್ಳ ಯಾವ ಚೇತನನೇ ಆಗಲಿ, ತನ್ನ ಆತ್ಮವು ಪರಮಾತ್ಮನಿಗೆ ಸೇರಿದುದೆಂದೂ, ಅದನ್ನು ರಕ್ಷಿಸಲು, ತಾನು ಅಸಮರ್ಥನೆಂದೂ ಮನಗಂಡು, ಕರ್ಮಬಂಧವನ್ನು ನೀಗಲು ಮಾಡಲೇಬೇಕಾದ ಕರ್ಮಯೋಗಾದಿಗಳನ್ನು ಮಾಡಲು ತಾನು ಅಶಕ್ತನೆಂದೂ, ಅನುಭವಿಸಿ ತಾನು ಕರ್ಮವನ್ನು ನೀಗಲು ಅಶಕ್ಯವೆಂದೂ, ಸರ್ವವಿಧ ಬಂಧುವಾದ ಪರಮಾತ್ಮನೇ ತನ್ನನ್ನು ಕರುಣಿಸಿ ರಕ್ಷಿಸಬೇಕೆಂದೂ, ಪರಮಾತ್ಮನ ಅಡಿದಾವರೆಯಲ್ಲಿ ಬಿನ್ನವಿಸಿ, ತನ್ನ ರಕ್ಷಾಭರವನ್ನು ಪರಮಾತ್ಮನಿಗೆ ಅರ್ಪಣೆಮಾಡುವುದೇ—"ಶರಣಾಗತಿ."

ಈ ರೀತಿ ಶರಣಾಗತಿ ಮಾಡುವಲ್ಲಿ ಪರಮಾತ್ಮನನ್ನು ಸಾಕ್ಷಾತ್ತಾಗಿ ದರ್ಶನ ಮಾಡುವ ಸ್ಥಿತಿಯಲ್ಲಿರುವ ಚೇತನನು ನೇರವಾಗಿ ತಾನೇ ಪರಮಾತ್ಮನನ್ನು ಕಂಡು ಶರಣಾಗತಿಯನ್ನು ಮಾಡಬಹುದು. ಇಲ್ಲದಿದ್ದರೆ ಆ ರೀತಿ ಪರಮಾತ್ಮನನ್ನು ಸಾಕ್ಷಾತ್ಕರಿಸಿರುವ ಆಚಾರ್ಯರಲ್ಲಿ ಶರಣಾಗತಿಯನ್ನು ಮಾಡಿ, ಅವರ ಮುಖಾಂತರ ಪರಮಾತ್ಮನಲ್ಲಿ ಶರಣಾಗತಿಯನ್ನು ಅನುಷ್ಠಿಸಿ ಮುಕ್ತನಾಗಬಹುದು.

ಪರಮಾತ್ಮನು ಹೇಗೆ ಅನುಗ್ರಹಶಕ್ತಿಯುಳ್ಳವನೋ, ಹಾಗೆಯೇ ದಂಡಧರನಾಗಿ ನಿಗ್ರಹಶಕ್ತಿಯುಳ್ಳವನೂ ಆಗಿದ್ದಾನೆ. ಭಗವದ್ಗೀತೆಯಲ್ಲಿ — "**ಶ್ರುತಿಸ್ಮೃತಿರ್ಮಮೈವಾಜ್ಞಾ ಯಸ್ತಾಮುಲ್ಲಂಘ್ಯ ವರ್ತತೇ । ಆಜ್ಞಾಚ್ಛೇದೀ ಮಮ ದ್ರೋಹೀ ಮದ್ಭಕ್ತೋಽಪಿ ನ ವೈಷ್ಣವಃ**"— ಎಂದು ಗೀತಾಚಾರ್ಯನೇ ಹೇಳಿರುವಂತೆ, ಶ್ರುತಿಸ್ಮೃತಿಗಳಲ್ಲಿ ವಿಧಿವಿಹಿತವಾದ ಕೆಲಸಗಳನ್ನು ಅನುಷ್ಠಿಸದೆ, ವಿಧಿನಿಷಿದ್ಧವಾದ ಕೆಲಸಗಳನ್ನು ಮಾಡುತ್ತಾ ತಪ್ಪಿನ ಪರಂಪರೆಯನ್ನೇ ಮಾಡುತ್ತಿರುವ ನಾವು ನೇರವಾಗಿ ಪರಮಾತ್ಮನಲ್ಲಿ ಪ್ರಾರ್ಥಿಸಿದರೆ, ಪರಮಾತ್ಮನು ನಮ್ಮ ತಪ್ಪುಗಳಿಗನುಗುಣವಾದ ಶಿಕ್ಷೆಯನ್ನು

ವಿಧಿಸುವ ಸಲುವಾಗಿ "**ಕ್ಷಿಪಾಮ್ಯಜಸ್ರಂ ಅಶುಭಾಂ ಆಸುರೀಷ್ವೇವ ಯೋನಿಷು**" ಇತ್ಯಾದಿಯಾಗಿ ನಿಗ್ರಹಿಸುತ್ತಾನೆ. ಆದ್ದರಿಂದ ಯಾರ ವಿಷಯದಲ್ಲಿ ಅವನು ಸದಾ ಪ್ರಸನ್ನಚಿತ್ತನಾಗಿರುತ್ತಾನೆಯೋ, ಅವರ ಮುಖಾಂತರ ಅವನಲ್ಲಿಗೆ ಹೋದಾಗ, ಅವರು ನಮ್ಮ ದೋಷಗಳನ್ನು ಮರೆ-ಮಾಚಿ, ನಾವು ತಪ್ಪು ಒಪ್ಪಿಕೊಂಡಿರುವುದನ್ನೂ, ನಮ್ಮ ಅಶಕ್ತತೆಯನ್ನೂ, ಮತ್ತೆ ಅವನನ್ನೇ ಸೇರಬೇಕೆಂಬ ಹಂಬಲವುಳ್ಳ, ಭಗವಂತನಿಗೆ ಒಪ್ಪುವ, ಅವನ ಅನುಗ್ರಹೈಕಪಾತ್ರವಾದ ನಮ್ಮ ಒಳ್ಳೆಯ ಗುಣಗಳನ್ನು ಮಾತ್ರ, ಅವನಲ್ಲಿ ಅರುಹಿ, ಅವನ ಕೃಪೈಕಪಾತ್ರರಾಗಿ ಮಾಡಿ ನಮ್ಮನ್ನುದ್ಧರಿಸುತ್ತಾರೆ. ಈ ಕೆಲಸವನ್ನು ಪರಮಾತ್ಮನ ಸಹಧರ್ಮಚಾರಿಣಿಯಾಗಿ ಸದಾ ಅವನ ಮುಖೋಲ್ಲಾಸಕ್ಕೆ ಕಾರಣಳೂ ಪಾತ್ರಳೂ ಆಗಿರುವ ಮಹಾಲಕ್ಷ್ಮಿಯೂ, ಮತ್ತು ಅವನ ಆಜ್ಞಾನುಜ್ಞಾಕೈಂಕರ್ಯಗಳನ್ನನುಷ್ಠಿಸುತ್ತಾ ಅವನ ಮುಖೋಲ್ಲಾಸಕ್ಕೆ ಪಾತ್ರರಾದ ಆಚಾರ್ಯರುಗಳು ಮಾತ್ರವೇ ಮಾಡಬಲ್ಲರು.

ಚೇತನೋದ್ಧಾರವೆಂಬ ಕಾರ್ಯದಲ್ಲಿ ವಿಶೇಷ ಆಸಕ್ತನಾದ ಪರಮಾತ್ಮನು ವಿಶೇಷವಾದ ತನ್ನ ದಯೆಯಿಂದಲೇ ಆಚಾರ್ಯರುಗಳನ್ನು ನಮ್ಮಲ್ಲಿಗೆ ಕಳುಹಿಸಿದ್ದಾನೆ. ಪರಮಾತ್ಮನ ದಯಾಗುಣವೇ ಮೂರ್ತಿವೆತ್ತಂತಿರುವವರೇ– 'ಆಚಾರ್ಯರು'. ಈ ವಿಷಯವನ್ನೇ ಶ್ರೀಮದ್ವೇದಾಂತದೇಶಿಕರು–

**"ವಿಗಾಹೇತೀರ್ಥ ಬಹುಳಾಂ ಶೀತಲಾಂ ಗುರುಸಂತತಿಂ |**
**ಶ್ರೀನಿವಾಸದಯಾಂ ಬೋಧಿಪರೀವಾಹಪರಂಪರಾಂ ||"**

(ದಯಾಶತಕ ೨)

ಎಂಬ ಶ್ಲೋಕದಲ್ಲಿ, 'ಸಂಸಾರಸಾಗರದಿಂದ ದಾಟಿಸುವ ಗುಣವುಳ್ಳವರಾಗಿ ತೀರ್ಥರೂಪರಾಗಿರುವ, ನಮ್ಮ ತಾಪಗಳನ್ನು ಹೋಗಲಾಡಿಸಿ ಮನಸ್ಸಿಗೆ ತಂಪನ್ನುಂಟುಮಾಡುವ ಶ್ರೀನಿವಾಸನ ದಯೆಯೆಂಬ ಸಮುದ್ರದ ಕೋಡಿಯ ಪ್ರವಾಹದ ಪರೀವಾಹದಂತಿರುವ ಗುರುಗಳ ಪರಂಪರೆಯನ್ನು ಆಶ್ರಯಿಸಿ

ಅವರ ಗುಣಾನುಭವವೆಂಬ ತೀರ್ಥದಲ್ಲಿ ಸ್ನಾನಮಾಡುತ್ತೇನೆ'. -ಎಂದು ಹೇಳಿಕೊಂಡಿದ್ದಾರೆ. ಇತರರು ದುಃಖದಲ್ಲಿದ್ದರೆ ಅದನ್ನು ಕಂಡು ತಾವೂ ದುಃಖಿತರಾಗಿ, ಅದನ್ನು ಸಹಿಸಲಾರದೆ, ಅವರಿಗೆ ಹಿತವನ್ನುಂಟುಮಾಡಿ ದುಃಖದಿಂದ ಪಾರುಮಾಡುವ ಗುಣವೇ-'ದಯಾ' ಅಥವಾ 'ಕರುಣೆ'. (ಪರದುಃಖದುಃಖಿತ್ವಮ್ ವಾ ಪರದುಃಖ ಅಸಹತ್ವಮ್, ವಾ ಪರಹಿತಪ್ರಾವಣ್ಯಂ ದಯಾ') ಈ ಗುಣವನ್ನು ನಮ್ಮ ಆಚಾರ್ಯರುಗಳಲ್ಲಿ ಪೂರ್ಣವಾಗಿ ಕಾಣಬಹುದು. ಪರಮಾತ್ಮನಲ್ಲಿ ಈ ಗುಣವಿದ್ದರೂ ಇತರ ಗುಣಗಳ ಮಧ್ಯದಲ್ಲಿ ಅದೂ ಒಂದಾಗಿ ವಿಶೇಷವಾಗಿ ಪ್ರಕಾಶಿಸುವುದಿಲ್ಲ. ಆದರೆ, ಆಚಾರ್ಯರುಗಳಲ್ಲಿ ಈ ಗುಣವೊಂದೇ ವಿಶೇಷವಾಗಿ ಪ್ರಕಾಶಿತವಾಗಿ ಸರ್ವೋಪಜೀವ್ಯವಾಗಿರುತ್ತದೆ. ಈ ವಿಷಯವನ್ನು ಬಹುಸ್ವಾರಸ್ಯವಾಗಿ ಒಬ್ಬ ಆಚಾರ್ಯರು ಈ ಕೆಳಕಂಡ ಶ್ಲೋಕದಲ್ಲಿ ವರ್ಣಿಸಿರುತ್ತಾರೆ.

ಲಕ್ಷ್ಮೀನಾಥಾಖ್ಯಸಿಂಧೌ ಶಠರಿಪುಜಲದಃ ಪ್ರಾಪ್ಯ ಕಾರುಣ್ಯನೀರಂ ।
ನಾಥಾದ್ರಾವಭ್ಯಷಿಂಚತ್ ತದನುರಘುವರಾಂಭೋಜಚಕ್ಷುರ್ಝರಾಭ್ಯಾಂ
ಗತ್ವಾತಾಂ ಯಾಮುನಾಖ್ಯಾಂ ಸರಿದಮುಥಯತೀಂದ್ರಾಖ್ಯ-
ಪದ್ಮಾಕರೇಂದ್ರಂ ।
ಸಂಪೂರ್ಣಪ್ರಾಣಿಸಸ್ಯೇ ಪ್ರವಹತಿ ಸತತಂ ದೇಶಿಕೇಂದ್ರಾಭ್ರವೃಂದೈಃ ॥

ಸಮುದ್ರದಲ್ಲಿರುವ ನೀರು ಆವಿಯಾಗಿ, ಮೇಘಗಳ ರೂಪವನ್ನು ತಾಳಿ, ಎಲ್ಲೆಡೆಯಲ್ಲಿಯೂ ಹರಡಿ, ವಿಶೇಷವಾಗಿ ಬೆಟ್ಟಗುಡ್ಡಗಳ ಮೇಲೆ ಮಳೆಸುರಿಸಿ, ಬೆಟ್ಟಗಳಲ್ಲಿ ಹರಿಯುವ ಅನೇಕ ಝರಿಗಳಾಗಿ ಪ್ರವಹಿಸಿ, ಭೂಮಿಯಲ್ಲಿ ಎಲ್ಲ ಒಟ್ಟುಗೂಡಿ ನದಿಯಾಗಿ ತುಂಬಿ ಪ್ರವಹಿಸಿ, ಅನೇಕ ಅಣೆಕಟ್ಟುಗಳು, ಕೆರೆ, ಕುಂಟೆ, ಸರೋವರಗಳಲ್ಲಿ ತಂಗಿನಿಂತು, ಅಲ್ಲಿಂದ ಮುಂದೆ ಅನೇಕ ದೊಡ್ಡದಾದ ಸಣ್ಣದಾದ ಕಾಲುವೆ ತೂಬುಗಳ ಮುಖಾಂತರ ಎಲ್ಲ ಪ್ರಾಣಿಗಳಿಗೂ ಸಸ್ಯಗಳಿಗೂ ಉಪಜೀವ್ಯವಾಗುವಂತೆ ಹರಿದು ಕೊನೆಯಲ್ಲಿ ಪುನಃ ಸಮುದ್ರವನ್ನೇ ಹೋಗಿಸೇರುತ್ತದೆ. ಈ ರೀತಿಯಲ್ಲಿಯೇ ಕರುಣಾಸಾಗರನಾದ

ಪರಮಾತ್ಮನಲ್ಲಿ ದಯೆಯೆಂಬ ತೀರ್ಥವು ಆವಿಯಾಗಿ ನಮ್ಮಾಳ್ವಾರ್‌ರವರ ರೂಪದಲ್ಲಿ ನೀರುಂಡಮೇಘದಂತಿದ್ದು, ನಮ್ಮ ಸಂಪ್ರದಾಯ ಪ್ರವರ್ತಕರಾದ ನಾಥಮುನಿಗಳೆಂಬ ಪರ್ವತದಲ್ಲಿ, ನಮ್ಮಾಳ್ವಾರ್‌ರವರ ತಿರುವಾಯ್‌ಮೊಳಿ ಮೊದಲಾದ ಶ್ರೀಸೂಕ್ತಿಗಳರೂಪದ ಮಳೆಸುರಿದು, ನಾಥಮುನಿಗಳಿಂದ ಮುಂದೆ ಶ್ರೀ ರಾಮಮಿಶ್ರರು (ರಘುವರ-ಮಣಕ್ಕಾಲ್ ನಂಬಿ) ಮತ್ತು ಪುಂಡರೀಕಾಕ್ಷ (ಅಂಭೋಜಚಕ್ಷುಃ-ಉಯ್ಯಕ್ಕೊಂಡಾರ್) ರೆಂಬ ಈರ್ವರಶಿಷ್ಯರಲ್ಲಿ ಝರಿಗಳ ರೂಪದಲ್ಲಿ ಹರಿದು, ಯಾಮುನ ಮುನಿ (ಆಳವಂದಾರ್) ಗಳೆಂಬ ಪ್ರವಾಹ ದಿಂದ ತುಂಬಿದ ನದಿಯಂತೆ ಪ್ರವಹಿಸಿ ಆಣೆಕಟ್ಟಿಯಂತೆಯೂ ಇರುವ ಭಗವದ್ರಾಮಾನುಜರಲ್ಲಿ ತಂಗಿ ನಿಂತು. ಅಲ್ಲಿಂದ ಮುಂದೆ ಎಲ್ಲಕಾಲಗಳಲ್ಲಿಯೂ ಎಲ್ಲರಿಗೂ ಸರ್ವೋಪಜೀವ್ಯವಾಗಿ, ವಿದ್ವಾಂಸರಿಗೂ, ಮಂದಮತಿಗಳಿಗೂ, ಮಧ್ಯಸ್ಥರಿಗೂ ಸರ್ವರಿಗೂ ಸಾರ್ವಕಾಲಿಕವಾಗಿ ತಮ್ಮ ಸರಳವಾದ, ಗಂಭೀರ ವಾದ, ಪ್ರೌಢವಾದ, ಸಂಸ್ಕೃತಭಾಷೆಯಲ್ಲಿಯೂ ಪ್ರಾಕೃತದಲ್ಲಿಯೂ, ಮಣಿಪ್ರವಾಳದಲ್ಲಿಯೂ, ಮತ್ತು ತಮಿಳುಭಾಷೆಯಲ್ಲಿಯೂ, ವ್ಯಾಖ್ಯಾನ, ಸ್ವತಂತ್ರವಾದ ಶಾಸ್ತ್ರಗ್ರಂಥಗಳು, ಪ್ರಬಂಧಗಳು, ಸ್ತೋತ್ರಗಳು, ನಾಟಕ ಮಹಾಕಾವ್ಯ, ಖಂಡಕಾವ್ಯ-ಸಂದೇಶಕಾವ್ಯ, ಮುಕ್ತಕಗಳ ರೂಪದಲ್ಲಿಯೂ ಅನೇಕರೂಪದಲ್ಲಿ ಸರ್ವಾಧಿಕಾರಿಗಳಿಗೂ ತತ್ವವನ್ನು ಭೋಧಿಸಿ, ಸರ್ವರೂ ಕರ್ಮದಸಂಕೋಲೆಯಿಂದ ಮುಕ್ತರಾಗಿ, ಐಹಿಕ ಆಮುಷ್ಮಿಕವಾಗಿ ಪರಮಾತ್ಮ-ನನ್ನು ಅನುಭವಿಸುತ್ತಾ, ಪರಿಪೂರ್ಣಬ್ರಹ್ಮಾನುಭವಕ್ಕೆ ಪಾತ್ರರಾಗುವಂತೆ ತಮ್ಮ ಗ್ರಂಥಗಳ ಮುಖಾಂತರ ಮಾಡಿದ ವೇದಾಂತದೇಶಿಕರು ಮತ್ತು ಅವರ ಅನುಯಾಯಿಗಳಾದ ಆಚಾರ್ಯಪರಂಪರೆಯಲ್ಲಿ ದೊಡ್ಡದಾದ, ಚಿಕ್ಕದಾದ ಕಾಲುವೆ ಮತ್ತು ತೂಬುಗಳಲ್ಲಿನ ತೀರ್ಥದಂತೆ ಪರಮಾತ್ಮನ ಕರುಣಾ ಗುಣವು ಪ್ರವಹಿಸುತ್ತಿದೆ-ಎಂದು ಹೇಳಿದ್ದಾರೆ.

ಸಮುದ್ರದಲ್ಲಿ ನೀರಿದ್ದರೂ ಅದು ಉಪ್ಪುಮಿಶ್ರಿತವಾಗಿರುವುದರಿಂದ, ಅಲ್ಲಿಯೇ ಇರುವ ಜಲಚರಪ್ರಾಣಿಗಳನ್ನು ಬಿಟ್ಟು ಉಳಿದವರು ಅದನ್ನು ಪಾನ ಮಾಡಿ ತಮ್ಮ ದಾಹವನ್ನು ನೀಗಿಸಿಕೊಳ್ಳಲು ಸಾಧ್ಯವಿಲ್ಲ, ಅಂತೆಯೇ

ಪರಮಾತ್ಮನು ಕೃಪಾಸಮುದ್ರನಾದರೂ, ಅವನಲ್ಲಿರುವ ದಂಡಧರತ್ವಾದಿ ಗುಣಗಳಿಂದ, ಎಂದೂ ತಪ್ಪನ್ನೆಸಗದಿರುವ ಮುಕ್ತರೂ ಮತ್ತು ನಿತ್ಯರನ್ನು ಬಿಟ್ಟು ಬದ್ಧಚೇತನರಾರೂ ಅವನಲ್ಲಿನ ಕೃಪೆಯನ್ನು ನೇರವಾಗಿ ಪಡೆದು ತಮ್ಮ ಕರ್ಮಬಂಧದಿಂದುಂಟಾಗಿರುವ ತಾಪವನ್ನು ನೀಗಿ, ಪರಮಾತ್ಮಾನುಭವ ಮಾಡಬೇಕೆಂಬ ದಾಹವನ್ನು ನೀಗಿಸಿಕೊಳ್ಳಲಾರರು. ಮೇಘವು ಸಮುದ್ರ-ದಲ್ಲಿನ ಲಾವಣ್ಯಾದಿ ದೋಷಗಳನ್ನು ಬಿಟ್ಟು, ಆವಿಯಾದ ನೀರನ್ನು ಮಾತ್ರ ಹೊಂದಿದ್ದರೂ ಎಲ್ಲೆಡೆಯಲ್ಲಿಯೂ ಎಲ್ಲಕಾಲಗಳಲ್ಲಿಯೂ ಮಳೆಯನ್ನು ವರ್ಷಿಸುವುದಿಲ್ಲ. ಆದುದರಿಂದ ಅದೂ ಸರ್ವೋಪಜೀವ್ಯವಾಗಿರುವುದಿಲ್ಲ. ಅಂತೆಯೇ ಪರಮಾತ್ಮನ ಕರುಣೆಯೇ ಮೂರ್ತಿವೆತ್ತಂತಿರುವ ನಮ್ಮಾಳ್ವಾರ್-ರವರು ತಾವು ಅನುಭವಿಸಿದ ಪರಮಾತ್ಮನ ಗುಣಾನುಭವಗಳನ್ನು ತಮ್ಮ ಕೃತಿ ರತ್ನಗಳಲ್ಲಿ ಸುಂದರವಾಗಿ ಹಾಡಿದ್ದರೂ, ದೂರದಿಂದ ಸುಂದರವಾಗಿ ಕಾಣುವ ಮೇಘದಂತೆ, ಕೇಳಲು ಸುಶ್ರಾವ್ಯವಾಗಿದ್ದು, ವ್ಯಾಖ್ಯಾನವಿಲ್ಲದೆ ಎಲ್ಲರಿಗೂ ಸುಲಭವಾಗಿ ಅರ್ಥವಾಗುವುದಿಲ್ಲ. ಮೇಘವು ವಿಶೇಷವಾಗಿ ಪರ್ವತದ ಮೇಲೆ ವರ್ಷಿಸಿದುದೇ ಝರಿಗಳರೂಪದಲ್ಲಿ ಪ್ರವಹಿಸಿ ನದಿಯಾಗುವಂತೆ, ನಮ್ಮಾಳ್ವಾರ್‌ರವರು ನಾಥಮುನಿಗಳ ಮೇಲೆ ವಿಶೇಷವಾದ ಕೃಪೆತೋರಿ, ಅವರ ಯೋಗ ದೆಶೆಯಲ್ಲಿ ದಿವ್ಯಪ್ರಬಂಧಗಳೆಲ್ಲವನ್ನೂ ಉಪದೇಶಿಸಿದರು. ಪರ್ವತದಲ್ಲಿನ ನೀರು ಅನೇಕ ಝರಿಗಳಾಗಿ ಪ್ರವಹಿಸಿ ಕೊನೆಯಲ್ಲಿ ಒಂದೇ ನದಿಯಾಗಿ ಸೇರುವಂತೆ, ನಾಥಮುನಿಗಳ ಸಾಕ್ಷಾತ್ ಶಿಷ್ಯರುಗಳಾದ ಪುಂಡರೀಕಾಕ್ಷರು ಮತ್ತು ರಾಮಮಿಶ್ರರು ನಾಥಮುನಿಗಳಿಂದಲೇ ದಿವ್ಯಪ್ರಬಂಧಗಳನ್ನು ಅರ್ಥ ಸಹಿತ ಅಧ್ಯಯನ ಮಾಡಿ ಮುಂದೆ ಯಾಮುನಮುನಿಗಳಿಗೆ ಉಪದೇಶಿಸಿದರು. ಎರಡು ದಡದಿಂದಕೂಡಿ ತುಂಬುನೀರಿನ ಪ್ರವಾಹದಿಂದ ಹರಿಯುವ ನದಿ-ಯಂತೆ, ಮತ್ತು ಪ್ರವಾಹದಲ್ಲಿ ಈಜಲು ಅಶಕ್ತನಾದವನು ದಡವನ್ನು ಆಶ್ರಯಿಸುವಂತೆ, ಕರ್ಮ, ಜ್ಞಾನ ಭಕ್ತಿಯೋಗಗಳನ್ನನುಷ್ಠಿಸಲು ಅಶಕ್ತ-ನಾದವನನುಷ್ಠಿಸುವ ಶರಣಾಗತಿಯನ್ನು ಸಾರುವ, 'ಚತುಶ್ಲೋಕೀ' ಮತ್ತು 'ಸ್ತೋತ್ರರತ್ನ'ಗಳೆಂಬ ಸರ್ವೋಪಜೀವ್ಯ ಗ್ರಂಥದ್ವಯಗಳಿಂದಲೂ, ಮತ್ತು ಪ್ರವಾಹದ ಮಧ್ಯದತೀರ್ಥದಂತೆ ತತ್ವವನ್ನು ಬೋಧಿಸುವ 'ಆಗಮ-

ಪ್ರಾಮಾಣ್ಯ', 'ಆತ್ಮಸಿದ್ಧಿ', 'ಸಂವಿತ್ಸಿದ್ಧಿ', 'ಈಶ್ವರಸಿದ್ಧಿ',–ಎಂಬ ಸಿದ್ಧಿತ್ರಯ ಮತ್ತು 'ಗೀತಾರ್ಥಸಂಗ್ರಹ'ಗಳೆಂಬ ತಮ್ಮ ಗ್ರಂಥಗಳ ಮುಖಾಂತರ ಯಾಮುನಮುನಿಗಳು ನಮ್ಮ ಸಂಪ್ರದಾಯವನ್ನು ಒಂದು ರೀತಿಯಲ್ಲಿ ರೂಪಿಸಿದರು. ನದಿಯ ನೀರು ಅಣ್ಣೆಕಟ್ಟುಗಳಲ್ಲಿ ಮತ್ತು ಸರೋವರಗಳಲ್ಲಿ ತಂಗಿ ನೀರಾವರಿಯ ನಿಯಮಗಳಿಗನುಗುಣವಾಗಿ ಎಲ್ಲದೇಶದವರಿಗೂ ಎಲ್ಲ ಕಾಲಗಳಲ್ಲಿಯೂ ಲಭಿಸುವಂತೆ ಕಾಲುವೆ ಮತ್ತು ತೂಬುಗಳಲ್ಲಿ ಹರಿಯು–ವಂತೆಯೇ, ಯಾಮುನರ ಅನುಗ್ರಹಕ್ಕೆ ಪಾತ್ರರಾಗಿ ಅವರ ಗ್ರಂಥಗಳನ್ನು ಅಧ್ಯಯನ ಮಾಡಿ, ಭಗವದ್ರಾಮಾನುಜರು ಗೀತಾಭಾಷ್ಯ, ಶ್ರೀಭಾಷ್ಯ, ವೇದಾರ್ಥಸಂಗ್ರಹ, ವೇದಾಂತದೀಪ, ವೇದಾಂತಸಾರ, ನಿತ್ಯಗ್ರಂಥ, ಶರಣಾಗತಿಗದ್ಯ, ವೈಕುಂಠಗದ್ಯ, ಮತ್ತು ಶ್ರೀರಂಗಗದ್ಯಗಳೆಂಬ ನವರತ್ನದಂತಿರುವ ನವಗ್ರಂಥಗಳಿಂದ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಾಪಿಸಿದರು. ನದಿಯು ಹರಿದುಬರುವಲ್ಲಿ ಅನೇಕ ಉಪನದಿಗಳು ಸೇರಿ ದೊಡ್ಡದಾಗಿ ಅಣೆಕಟ್ಟುಸೇರುತ್ತೆ. ಹಾಗೆಯೇ ಭಗವದ್ರಾಮಾನುಜರೂ ಯಾಮುನಮುನಿ–ಗಳ ಗ್ರಂಥಗಳನ್ನು ಅಧ್ಯಯನ ಮಾಡುತ್ತಿರುವಾಗಲೇ ಕಾಂಚೀಪೂರ್ಣರು, ಗೋಷ್ಠೀಪೂರ್ಣರು ಮತ್ತು ಶ್ರೀಶೈಲಪೂರ್ಣರೆಂಬ ಆಚಾರ್ಯರುಗಳ ಉಪದೇಶಾಮೃತವನ್ನೂ ಪಡೆದವರಾಗಿ ಸಂಪ್ರದಾಯಸ್ಥಾಪನಮಾಡಿದರು. ಅಣೆಕಟ್ಟಿನ ನೀರು, ಅನೇಕಕಾಲ ಅಲ್ಲಿಯೇ ತಂಗಿನಿಂತು ಮಳೆಯಾಗದೆ ಬೇಸಿಗೆಯ ಬೇಗೆಯಲ್ಲಿ ಜನಗಳು ತೊಳಲುತ್ತಿರುವ ಸಮಯಗಳಲ್ಲಿ ಜನಗಳ ಹಿತಕ್ಕನುಗುಣವಾಗಿ ಕಾಲಕಾಲದಲ್ಲಿ ಕಾಲುವೆ ತೂಬುಗಳ ಮುಖಾಂತರ ಪ್ರವಹಿಸುವಂತಯೇ, ಮುಂದೆ ಭಗವದ್ರಾಮಾನುಜರಿಂದ ಸಿದ್ಧಾಂತವು ಸ್ಥಾಪಿಸಲ್ಪಟ್ಟಿದ್ದರೂ, ತತ್ವವನ್ನರಿಯದೇ ಅಪಸಿದ್ಧಾಂತಗಳ ಉಪದೇಶಗಳಲ್ಲಿ ಜನಗಳು ಸಿಲುಕಿಕೊಂಡು ತೊಳಲುತ್ತಿರುವಲ್ಲಿ, ರಾಮಾನುಜರ ಗ್ರಂಥಗಳನ್ನು ಅಧ್ಯಯನಮಾಡಿ ಮೇಲೆಯೇ ಹೇಳಿರುವಂತೆ, ಸರ್ವಾಧಿಕಾರಿಗಳಿಂದಲೂ ಸರ್ವೋಪಜೀವ್ಯವಾಗಿರುವ ಶ್ರೀಮದ್ವೇದಾಂತದೇಶಿಕರ ಗ್ರಂಥಗಳ ಮುಖಾಂತರವೂ ಮತ್ತು ಅವರ ಅನುಯಾಯಿಗಳಾದ ಆಚಾರ್ಯರುಗಳ

ಕೃತಿರತ್ನಗಳ ಮುಖಾಂತರವೂ ಭಗವಂತನ ಚೇತನೋದ್ಧಾರ ಕಾರ್ಯದ ದಯಾಗುಣವು ನಿರಂತರ ಪ್ರವಹಿಸುತ್ತದೆ.

ಭಕ್ತಿಯೋಗಕ್ಕೆ ಅನರ್ಹರಾಗಿ ಶರಣಾಗತರಾದ ನಮ್ಮನ್ನು ಪರಮಾತ್ಮನು ಉದ್ಧರಿಸಬೇಕಾದರೆ, ಅವನ ದಯಾಗುಣವೊಂದೇ ನಮಗೆ ರಕ್ಷಕವಾಗಿರುವುದು. ಪರಮಾತ್ಮನ ದಯಾಗುಣವೆಂಬ ತೀರ್ಥದ ಪ್ರವಾಹದಂತಿರುವುದೇ ನಮ್ಮ ಆಚಾರ್ಯರುಗಳ ಪರಂಪರೆ. ತೀರ್ಥದಲ್ಲಿನ ತಾಪಹಾರಕವಾದ ಶೈತ್ಯ, ಮಾಧುರ್ಯ, ರಮಣೀಯತೆ, ಪ್ರಸನ್ನತೆ ಮೊದಲಾದ ಗುಣಗಳೇ-ನಮ್ಮ ಆಚಾರ್ಯರುಗಳ ಗುಣಾನುಭವ, ದಿವ್ಯಮಂಗಳ ವಿಗ್ರಹಧ್ಯಾನ, ಉಪದೇಶಾಮೃತದ ಆಸ್ವಾದನೆ ಮುಂತಾದುವು. ತೀರ್ಥದ ಸ್ನಾನಪಾನಗಳಿಂದ ನಮ್ಮ ದೇಹದ ಬಾಹ್ಯಾಭ್ಯಂತರಗಳ ಮಾಲಿನ್ಯಗಳು ತೊಲಗಿ, ತಾಪಗಳನ್ನು ನೀಗಿ, ಪರಿಶುದ್ಧ ದೇಹವುಳ್ಳವರಾಗಿ ಸಂತೋಷಿಸುವಂತೆ, ಈ ಆಚಾರ್ಯರುಗಳ ಗುಣಾನುಭವಾದಿಗಳಲ್ಲಿ ಮುಳುಗಿ ಧ್ಯಾನಾದಿಗಳನ್ನು ಮಾಡುವುದರಿಂದ, ನಮ್ಮ ಸರ್ವ ವಿಧಪಾಪಗಳೂ ದೂರವಾಗಿ ಬಾಹ್ಯಾಭ್ಯಂತರ ಶುದ್ಧಿ ಏರ್ಪಟ್ಟು ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವೆಂಬ ತಾಪತ್ರಯಗಳನ್ನು ನೀಗಿ ಆಚಾರ್ಯರುಗಳ ಕೃಪಾಕಟಾಕ್ಷಕ್ಕೆ ಪಾತ್ರರಾಗಿ, ಪರಮಾತ್ಮನ ಅನುಗ್ರಹಕ್ಕೂ ಪಾತ್ರರಾಗಿ, ನಿರ್ಮಲಚಿತ್ತರಾಗಿ ಐಹಿಕಾಮುಷ್ಮಿಕವಾದ ಸರ್ವವಿಧವಾದ ಅಪರಿಮಿತವಾದ ಐಶ್ವರ್ಯವನ್ನೂ ಪಡೆದವರಾಗಿ, ಪರಿಪೂರ್ಣಬ್ರಹ್ಮಾನುಭವವನ್ನು ಪಡೆಯುತ್ತೇವೆ. ಈ ರೀತಿಯಾಗಿ ಆಚಾರ್ಯರು ಸಂಸಾರ ಸಾಗರದಿಂದ ನಮ್ಮನ್ನು ದಾಟಿಸುವುದರಿಂದಲೇ, ಅವರನ್ನು ತೀರ್ಥರೆಂದು ಕರೆಯುತ್ತಾರೆ. ಇವರ ಕೃಪೆಗೆ ಪಾತ್ರರಾಗದಿದ್ದರೆ, ಪರಮಾತ್ಮನ ಅನುಗ್ರಹ ಉಂಟಾಗುವುದಿಲ್ಲ. ಈ ವಿಷಯವನ್ನು ಆಚಾರ್ಯರೊಬ್ಬರು ಈರೀತಿ ಹೇಳಿದ್ದಾರೆ:-'**ಜಲಾದಪೇತಂ ಕಮಲಂ ನಪೋಷಯತಿ ಶೋಷಯತಿ ರವಿಃ**' – ಎಂದು. ಸೂರ್ಯನಿಗೆ, ಮೊಗ್ಗಿನಂತಿರುವ ಕಮಲವನ್ನು, ತಾನು ಉದಯವಾಗಿ ತನ್ನ ಕಿರಣಗಳಿಂದ ಅರಳುವಂತೆ ಮಾಡಿ ಪೋಷಿಸುವ ಸಾಮರ್ಥ್ಯ-

ವುಂಟು. ಆದರೆ ಕಮಲವು ತೀರ್ಥದಲ್ಲಿ ಬೇರೂರಿದ್ದರೇ ಮಾತ್ರವೇ ಪೋಷಿಸುತ್ತಾನೆಯೇ ವಿನಹ, ಜಲದಿಂದ ಹೊರಬಿದ್ದ ಕಮಲವನ್ನು ಪೋಷಿಸದೆ ಇರುವುದೇ ಅಲ್ಲದೆ, ಬಾಡಿಹೋಗುವಂತೆಯೂ ಮಾಡುತ್ತಾನೆ. ಅಂತೆಯೇ ಪರಮಾತ್ಮನೂ ಎಲ್ಲ ಚೇತನರನ್ನೂ ಉದ್ಧರಿಸುವ ಸಾಮರ್ಥ್ಯ-ವನ್ನು ಹೊಂದಿದ್ದರೂ, ಆಚಾರ್ಯರ ಕೃಪಾಕಟಾಕ್ಷವೆಂಬ ತೀರ್ಥದಲ್ಲಿ ಸ್ಥಿರ-ವಾಗಿರುವ ಚೇತನರನ್ನು ಮಾತ್ರವೇ, ತನ್ನ ಸಂಕಲ್ಪಸೂರ್ಯೋದಯದಿಂದ ಪ್ರಸರಿಸುವ ಅನುಗ್ರಹವೆಂಬ ಕಿರಣಗಳಿಂದ ಪೋಷಿಸಿ ಉದ್ಧರಿಸುತ್ತಾನೆ. ಆಚಾರ್ಯ ಕೃಪಾಕಟಾಕ್ಷಕ್ಕೆ ಪಾತ್ರರಾಗದವರನ್ನು ಉದ್ಧರಿಸದಿರುವುದೊಂದೇ ಅಲ್ಲದೆ ತನ್ನ ನಿಗ್ರಹಕ್ಕೂ ಪಾತ್ರರನ್ನಾಗಿಸುತ್ತಾನೆ.

ಈ ರೀತಿಯಾಗಿ ಆಚಾರ್ಯರೂ ಪರಮಾತ್ಮನಂತೆಯೇ ಬಾಹ್ಯಅಭ್ಯಂತರ ಅಂಧಕಾರಗಳನ್ನು ತೊಲಗಿಸಿ, ಪಾಪವನ್ನು ದೂರಮಾಡಿ, ತನಗೆ ಸಮನಾದ ಮುಕ್ತಾನುಭವವನ್ನೂ ಅನುಗ್ರಹಿಸಿ, ಕರ್ಮಬಂಧವಾದ ಬೇರೊಂದು ಜನ್ಮ ಬಾರದಂತೆ ಮಾಡಿ, ಅಪ್ರಾಕೃತ ಜನ್ಮವನ್ನು ಕೊಟ್ಟು, ದಿವ್ಯವಾದ ಐಶ್ವರ್ಯವನ್ನು ಹೊಂದಿಸುವ ಪ್ರಭಾವವುಳ್ಳವರಾಗಿ, ತಡೆಯಿಲ್ಲದಿರುವ ಯಾರನ್ನೂ ಹಿಂಸಿಸದಿರುವ ಋಜುಭಾವವನ್ನು ಹೊಂದಿರುವವರಾಗಿ ನಿಯತ-ವಾದ ಅಪರಿಮಿತವಾದ ಆನಂದಸ್ವರೂಪರಾಗಿ, ಎಲ್ಲ ಚೇತನರಿಗೆ ಶೇಷಿ-ಯಾಗಿರುವುದರಿಂದ ಪರಮಾತ್ಮನಂತೆಯೇ ನಿತ್ಯವೂ ಸತ್ಪುರುಷರಿಂದ ಉಪಾಸ್ಯರಾಗಿರುತ್ತಾರೆ.

**ಅಜ್ಞಾನಧ್ವಾಂತರೋಧಾದಘಪರಿಹರಣಾತ್ ಆತ್ಮಸಾಮ್ಯಾವಹತ್ವಾತ್ |**
**ಜನ್ಮಪ್ರಧ್ವಂಸಿ ಜನ್ಮಪ್ರದಗರಿಮತಯಾ ದಿವ್ಯದೃಷ್ಟಿಪ್ರಭಾವಾತ್ |**
**ನಿಷ್ಪ್ರತ್ಯೂಹಾನೃಶಂಸ್ಯಾತ್ ನಿಯತರಸತಯಾ ನಿತ್ಯಶೇಷಿತ್ವಯೋಗಾತ್**
**ಆಚಾರ್ಯಃ ಸದ್ಭಿಃ ಅಪ್ರತ್ಯುಪಕರಣಧಿಯಾ ದೇವವತ್ಸ್ಯಾದುಪಾಸ್ಯಃ ||**

—ನ್ಯಾಸವಿಂಶತಿ

ಯಾವುದಾವರೊಂದೊಂದು ಕಾಲಗಳಲ್ಲಿ ಮಾತ್ರ ಸಂಸಾರ ಸಾಗರದಲ್ಲಿ ಮುಗ್ನರಾದ ಚೇತನೋದ್ಧಾರಕ್ಕಾಗಿ ಪರಮಾತ್ಮನು ಅವತರಿಸುತ್ತಾನೆ. ಆದರೆ

ಎಲ್ಲ ಕಾಲದಲ್ಲಿಯೂ ಚೇತನೋದ್ಧಾರವೆಂಬ ಕಾರ್ಯವೊಂದರಲ್ಲಿಯೇ ನಿರತರಾದ ಆಚಾರ್ಯರಿಗೆ ಸಮಾನವಾಗಿಯಾಗಲಿ ಅಧಿಕವಾಗಿಯಾಗಲಿ ಬೇರೊಂದು ದೇವತೆಯೇ ಇಲ್ಲವೆಂದೂ, ಈ ಕೆಳಗಿನ ಶ್ಲೋಕದಲ್ಲಿ ವೇದಾಂತ ದೇಶಿಕರು ಅಪ್ಪಣೆಕೊಟ್ಟಿದ್ದಾರೆ :–

**"ಆಚಾರ್ಯಾದಿಹದೇವತಾಂ ಸಮಧಿಕಾಂ ಅನ್ಯಾಂ ನ ಮನ್ಯಾಮಹೇ।**
**ಯಸ್ಯಾಸೌ ಭಜತೇ ಕದಾಚಿದಜಹದ್ಭೂಮಾಃ ಸ್ವಯಂ ಭೂಮಿಕಾ।**
**ಮಗ್ನಾನಾಂ ಭವಿನಾಂ ಭವಾರ್ಣವ ಸಮುತ್ತಾರಾಯ ನಾರಾಯಣಃ"॥**

ನಮ್ಮ ಶರಣಾಗತಿ ಫಲಿಸಬೇಕಾದರೆ, ಭಕ್ತಿಯೋಗಕ್ಕೆ ಅನರ್ಹರಾಗಿ ಸಂಸಾರಸಾಗರದಲ್ಲಿ ತೊಳಲುವಂತೆ ಕರ್ಮಬಂಧದಿಂದ ಜ್ಞಾನಸಂಕೋಚವಾಗಿ, ಅಜ್ಞಾನವೆಂಬ ಕತ್ತಲೆಯಿಂದ, ಪರಮಾತ್ಮನನ್ನು ಸೇರಲು ದಾರಿಕಾಣದವರಾಗಿರುವ ಎಲ್ಲ ಬದ್ಧ ಚೇತನರಿಗೂ ಪರಿಪೂರ್ಣ ಆನಂದಾನುಭವಕ್ಕೆ ದಾರಿಮಾಡಿಕೊಡುವ 'ಶರಣಾಗತಿ' ಎಂಬ— ನಂದಾದೀಪವಾದ ದಾರಿದೀಪವನ್ನು ಹಚ್ಚಿ ಇಟ್ಟು ಎಲ್ಲರನ್ನೂ ರಕ್ಷಿಸಿದ ನಮ್ಮ ಆಚಾರ್ಯವರ್ಯರಾದ ಶ್ರೀಮದ್ವೇದಾಂತ ದೇಶಿಕರನ್ನು ನಾವೆಲ್ಲರೂ. ಪರಮಾತ್ಮನನ್ನೂ, ಅವನ ಮಂತ್ರಗಳನ್ನೂ ಉಪಾಸಿಸುವಂತೆಯೇ ಪೂರ್ಣವಾದ ಭಕ್ತಿಯಿಂದ ಉಪಾಸಿಸಬೇಕು. ಇದೇ ಗುರಿಯನ್ನು ನಾವು ಸೇರಲು ಸಾಧನವಾದುದು.

**"ಮಂತ್ರೇತದ್ದೇವತಾಯಾಂ ಚ ತಥಾ ಮಂತ್ರಪ್ರದೇ ಗುರೌ।**
**ತ್ರಿಷು ಭಕ್ತಿಃ ಸದಾ ಕಾರ್ಯಾ ಸಾ ಹಿ ಪ್ರಥಮ ಸಾಧನಂ॥"**

ಈ ವಿಷಯವನ್ನೇ ಆಚಾರ್ಯರು ರಹಸ್ಯತ್ರಯಸಾರದ ಶಿಷ್ಯಕೃತ್ಯಾಧಿಕಾರದಲ್ಲಿ ಈ ರೀತಿ ಬಣ್ಣಿಸಿದ್ದಾರೆ :

**ಏತ್ತಿ ಮನತ್ತೆಳಿಲ್ ಜ್ಞಾನವಿಳಕ್ಕೈ ಇರುಳನೈತ್ತುಂ**
**ಮಾತ್ತಿನವರ್ಕ್ಕುಒರುಕೈಮ್ಮಾರು ಮಾಯನುಂ ಕಾಣಹಿಲ್ಲಾರ್,**

**ಪ್ರೋತ್ತಿಯುಹಪ್ಪದುಂ ಪುಂದಿಯಲ್ ಕೊಳ್ವದುಂ ಪೊಂಗು ಪುಹಳ್**
**ಶಾತ್ತಿವಳರ್ಪದುಂ ಶೆತ್ತಲ್ಲವೋ ಮುನ್ನಂ ಪೆತ್ತದರ್ಕೇ ||೩೮||**
— ಅಧಿಕಾರ ಸಂಗ್ರಹಂ

'ಶಿಷ್ಯನ ಮನಸ್ಸಿನಲ್ಲಿ ಉಜ್ವಲವಾದ ಜ್ಞಾನವೆಂಬದೀಪವನ್ನು ಬೆಳಗಿ, ಅಜ್ಞಾನವೆಂಬ ಅಂಧಕಾರವನ್ನು ತೊಲಗಿಸಿ; ಉಪಕರಿಸಿದ ಆಚಾರ್ಯರಿಗೆ ಪ್ರತ್ಯುಪಕಾರವನ್ನುಮಾಡಲು ಆಶ್ಚರ್ಯ ಚೇಷ್ಟಿತನಾದ ಪರಮಾತ್ಮನೂ ಅರಿಯನು. ಆಚಾರ್ಯರನ್ನುಸ್ತುತಿಸಿ ಸಂತೋಷಪಡಿಸುವುದು, ಬುದ್ಧಿಯಿಂದ ಮಾನಸಿಕವಾಗಿ ಧ್ಯಾನಮಾಡುವುದು, ಅತ್ಯಧಿಕವಾದ ಆಚಾರ್ಯರ ಕಲ್ಯಾಣಗುಣಗಳನ್ನು ಲೋಕದಲ್ಲಿ ಉದ್ಘೋಷಿಸಿ ಹೆಚ್ಚಿಸುವುದೇ — ನಾವು ಅವರಿಂದ ಪಡೆದ ಮಹಾಲಾಭಕ್ಕೆ ಅತ್ಯಲ್ಪವಾದ ಕಾಣಿಕೆಯಲ್ಲವೇ'— ಎಂದು.

ನಿತ್ಯರೂ ಮತ್ತು ಮುಕ್ತಾತ್ಮರು ಕರ್ಮ–ಬಂಧಕ್ಕೊಳಗಾಗದೆ, **'ತದ್ವಿಷ್ಣೋಃ ಪರಮಂ ಪದಗ್ಂ ಸದಾ ಪಶ್ಯಂತಿ ಸೂರಯಃ' ಮತ್ತು 'ಋಚಃ ಸಾಮಾನಿ ಯಜುಗ್ಂಷಿ । ಸಾ ಹಿ ಶ್ರೀರಮೃತಾ ಸತಾಂ'**— ಎಂದು ಶ್ರುತಿಯು ತಿಳಿಸುವಂತೆ ಶ್ರೀವೈಕುಂಠದಲ್ಲಿದ್ದು ಭಗವಂತನನ್ನು ಕಾಣುತ್ತಾ ಸದಾ ಪರಮಾತ್ಮನ ನಿತ್ಯಕೈಂಕರ್ಯ ಶ್ರೀಯನ್ನು ಹೊಂದಿ, ಪರಬ್ರಹ್ಮಾನುಭವದಲ್ಲಿ ಮುಳುಗಿದ್ದರೂ, **'ಇಮಾಂ ಲೋಕಾನ್ ಕಾಮಾನ್ನೀ ಕಾಮರೂಪ್ಯನು ಸಂಚರನ್, ಜಕ್ಷನ್‌ಕ್ರೀಡನ್ ರಮಮಾಣಃ'** — ಇತ್ಯಾದಿಯಾಗಿ ಶ್ರುತಿಯು ಹೇಳುವಂತೆ ತಮ್ಮ ಇಷ್ಟಬಂದಂತೆ ಇಷ್ಟವಾದ ರೂಪವನ್ನು ಪಡೆದು ಪರಮಾತ್ಮನ ಲೀಲಾವಿಭೂತಿಯಲ್ಲಿರುವ ಲೋಕಗಳಲ್ಲಿಯೂ ಕರ್ಮಬಂಧಕ್ಕೊಳಗಾಗದೆ ಬಂದುಹೋಗಬಹುದು. ಈ ರೀತಿ ಇರುವಲ್ಲಿ, ಚೇತನೋದ್ಧಾರಕ್ಕೆಂದೇ ಪರಮಾತ್ಮನಿಂದ ಪ್ರೇರಿಸಲ್ಪಟ್ಟು, ಆಚಾರ್ಯರೂಪದಲ್ಲಿ ಇಲ್ಲಿ ಅವತರಿಸಿ, ಧರ್ಮಸಂಸ್ಥಾಪನೆಯನ್ನು ಮಾಡಿ, ಮತ್ತೆ ಲೀಲಾವಿಭೂತಿಯನ್ನು ಸೇರಿದ್ದರೂ, ತಮ್ಮಲ್ಲಿ ವಿಶೇಷವಾದ ಭಕ್ತಿ-

ಯಿಂದ ಕೂಡಿದ ಶಿಷ್ಯವರ್ಗವು, ಎಲ್ಲಿ, ಯಾವರೂಪದಲ್ಲಿ ಯಾವ ಹೆಸರಿನಿಂದಿದ್ದು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರೆ, ಅಲ್ಲಿ ಅದೇ ರೂಪದಲ್ಲಿದ್ದು ಅದೇ ಹೆಸರಿನಿಂದ ಕೂಡಿ ಶಿಷ್ಯವರ್ಗಕ್ಕೆ ಅನುಗ್ರಹ ಮಾಡುತ್ತಾರೆ– ಎನ್ನುವುದರಲ್ಲಿ ಸಂದೇಹವಿಲ್ಲ.

ಈ ರೀತಿ ನಾವೆಲ್ಲರೂ ಆಚಾರ್ಯರನ್ನು ಪರಮಾತ್ಮನಂತೆಯೇ ಉಪಾಸಿಸಲು ಅನುಕೂಲಿಸುವಂತೆ, ಶ್ರೀಮದಾಚಾರ್ಯರ ಸಾಕ್ಷಾತ್ಪುತ್ರರೂ, ಆಚಾರ್ಯರಂತೆಯೇ ಮಹಿಮಾನ್ವಿತರೂ ಆಗಿದ್ದ ಶ್ರೀಮನ್ನಯಿನಾರಾಚಾರ್ಯರು ಅಥವಾ ಕುಮಾರವರದಾಚಾರ್ಯ ಸ್ವಾಮಿಗಳು, ನಮ್ಮ ಆಚಾರ್ಯರ ಗುಣಗಳನ್ನು ಪ್ರಕಾಶಪಡಿಸುವ ಆಚಾರ್ಯರ ದಿನಚರಿ, ಅವರನ್ನು ನಾವು ಧ್ಯಾನಮಾಡಲು—ಅವರ ಭವ್ಯವಾದ ದಿವ್ಯ ಮಂಗಳ ವಿಗ್ರಹಧ್ಯಾನ, ಅವರನ್ನು ಸ್ತುತಿಸಿ, ಅವರಲ್ಲಿ ನಮ್ಮ ಪ್ರಾರ್ಥನೆಯನ್ನರುಹಿ ಅವರಿಗೆ ಮಂಗಳವನ್ನು ಹಾಡುವ ದೇಶಿಕಸ್ತುತಿ, ಶ್ರೀಮದ್ವೇದಾಂತದೇಶಿಕ ಪ್ರಪತ್ತಿ', 'ಪ್ರಾರ್ಥನಾಷ್ಟಕಂ' ಮತ್ತು 'ವೇದಾಂತದೇಶಿಕ ಮಂಗಳಾಶಾಸನ'ಗಳೆಂಬ ಕೃತಿರತ್ನಗಳನ್ನು ರಚಿಸಿ ನಮಗೆ ಅನುಗ್ರಹಿಸಿ ಕೊಟ್ಟಿದ್ದಾರೆ.

ಪ್ರಕೃತ, ಈ ಪುಸ್ತಕದಲ್ಲಿ ವಿಶೇಷವಾಗಿ ಆಚಾರ್ಯರನ್ನು ಧ್ಯಾನಿಸಲು ಅನುಕೂಲವಾದ 'ವೇದಾಂತದೇಶಿಕ ವಿಗ್ರಹಧ್ಯಾನ', ಅವರನ್ನು ಪೂರ್ಣಸಾನಿಧ್ಯದೊಡನೆ ಸದಾ ನಮ್ಮ ಹೃದಯದೇಗುಲದಲ್ಲಿ ಪ್ರತಿಷ್ಠಾಪನೆ ಮಾಡುವಮಂತ್ರರೂಪವಾದ ಅವರ (ತನಿಯ) ಸಾನ್ನಿಧ್ಯಯಾಚನಾರೂಪವಾದ ಬಿಡಿ ಪದ್ಯ, ಮತ್ತೆ ನಮ್ಮ ಪ್ರಾರ್ಥನೆಗೆ ಓಗೊಟ್ಟು, ನಮ್ಮ ಹೃದಯ ಮಂದಿರದಲ್ಲಿ ಬಂದು ಬಿಜಯಮಾಡಿಸಿದ ಆಚಾರ್ಯರಿಗೆ, ನಾವು ಅರ್ಘ್ಯಪಾದ್ಯ ಆಚಮನೀಯಾದಿ ಉಪಚಾರಗಳನ್ನರ್ಪಿಸಿ, ಅವರ ಅನೇಕ ಗುಣವಿಭವಾದಿಗಳನ್ನು ತಿಳಿಸುವ ಅವರ ೧೦೮ ನಾಮಾವಳಿಗಳನ್ನು ಹೇಳುತ್ತಾ ನಮ್ಮ ಭಕ್ತಿಕುಸುಮವನ್ನರ್ಪಿಸಲು ಅನುಕೂಲಿಸುವಂತಿರುವ– 'ಆಚಾರ್ಯರ ಅಷ್ಟೋತ್ತರಶತನಾಮಾವಳಿ', ಬಳಿಕ ಅವರಿಗೆ ಮಂಗಳ-

ವನ್ನು 'ಹಾಡಲು ಆಚಾರ್ಯರ ಮಂಗಳಾಶಾಸನ' ಮತ್ತು ಕೊನೆಯದಾಗಿ, ಆಚಾರ್ಯರಲ್ಲಿ 'ಏನನ್ನು-ಹೇಗೆ' — ಪ್ರಾರ್ಥನೆ ಮಾಡಬೇಕೆಂಬುದನ್ನು ತಿಳಿಸುವ – 'ಪ್ರಾರ್ಥನಾಷ್ಟಕ'—ಸ್ತೋತ್ರಗಳನ್ನು ಪ್ರತಿಯೊಬ್ಬ ಕನ್ನಡ ಜನತೆಯೂ, ಅಧ್ಯಯನ ಮಾಡಿ, ಅರ್ಥಮಾಡಿಕೊಂಡು, ಆಚಾರ್ಯರನ್ನು ಉಪಾಸಿಸಿ, ಅವರ ಕೃಪೆಗೆ ಪಾತ್ರರಾಗಬೇಕೆಂದು ಕನ್ನಡ ಅನುವಾದ-ದೊಡನೆ ಪ್ರಕಾಶಿಸಲು ದಾಸನು ಯತ್ನಿಸುತ್ತಿದ್ದಾನೆ. ಇದರಿಂದ ಚೇತನರು ಆಚಾರ್ಯರ ಕೃಪೆಗೆ ಪಾತ್ರರಾದರೆ, ದಾಸನ ಯತ್ನ ಸಫಲವಾದಂತೆ.

"ಕ್ಲೇಶಃ ಫಲೇನ ಹಿ ಪುನಃ ನವತಾಂ ವಿಧತ್ತೆ"

ಬೆಂಗಳೂರು
ವಿಭವನಾಮ ಸಂವತ್ಸರ, ಕನ್ಯಾಮಾಸ
ಶ್ರವಣ ನಕ್ಷತ್ರ

ಇತಿ ಸಜ್ಜನವಿಧೇಯಃ
ಎ. ಅನಂತನರಸಿಂಹಾಚಾರ್

|| ಇತಿ ಶಮ್ ||

|| ಶ್ರೀರಸ್ತು ||

## || ಶ್ರೀಮದ್ವೇದಾಂದೇಶಿಕವಿಗ್ರಹಧ್ಯಾನಮ್ ||

**ಮನಃ ಪ್ರಸೂನಸ್ತಬಕಂ ಮದೀಯಂ**
**ನಾಥಸ್ಯ ಕೌತೂಹಲಮಾತನೋತು ।**
**ಬಿಭರ್ತಿ ಯೋ ಭಾಗವತೇಷು ಸರ್ವ-**
**ತಂತ್ರಸ್ವತ್ರೇಷು ಚ ಪಾರತಂತ್ರ್ಯಮ್ ॥೧॥**

**ಯಃ** = ಯಾವ ಆಚಾರ್ಯರು, **ಭಾಗವತೇಷು** = ಭಾಗವತರ ವಿಷಯದಲ್ಲಿ, **ಪಾರತಂತ್ರ್ಯಂ** = ಪರತಂತ್ರರಾಗಿರುವಿಕೆಯನ್ನು, **ಚ** = ಮತ್ತು, **ಸರ್ವತಂತ್ರ ಸ್ವತಂತ್ರೇಷು** = ಸರ್ವತಂತ್ರಗಳಲ್ಲಿಯೂ ಸ್ವತಂತ್ರರಾಗಿರುವಿಕೆ-ಯಲ್ಲಿ, **ಪಾರತಂತ್ರ್ಯಮ್** = ಪರಿಪೂರ್ಣ ಪಾಂಡಿತ್ಯವನ್ನೂ, **ಬಿಭರ್ತಿ** = ಹೊಂದಿದ್ದಾರೆಯೋ, (ಆ ನಮ್ಮ) **ನಾಥಸ್ಯ** = ಆಚಾರ್ಯರಾದ ವೇದಾಂತ ದೇಶಿಕರ ವಿಷಯದಲ್ಲಿ, (ಅವರಿಗೆ ತನ್ನನ್ನು ಅರ್ಪಿಸಿಕೊಳ್ಳುವ ವಿಷಯದಲ್ಲಿ) **ಮದೀಯಂ** = ನನ್ನ, **ಮನಃ ಪ್ರಸೂನಸ್ತಬಕಂ** = ಮನಸ್ಸೆಂಬ ಹೂಗುಚ್ಛವು **ಕೌತೂಹಲಂ** = ಕುತೂಹಲವನ್ನು, **ಆತನೋತು** = ಪರಿಪೂರ್ಣವಾಗಿ ಹೊಂದಲಿ.

ಈ ಶ್ಲೋಕದಲ್ಲಿ ಕುಮಾರವರದಾಚಾರ್ಯಸ್ವಾಮಿಗಳು ತಮ್ಮ ಮನಸ್ಸು ಸದಾ ನಮ್ಮ ಆಚಾರ್ಯರನ್ನು ಸೇರಿ ನಿರಂತರವಾಗಿ ಅವರನ್ನು ಅನುಭವಿಸುವಂತಾಗಲಿ ಎಂದು ಪ್ರಾರ್ಥಿಸಿದ್ದಾರೆ. ಮತ್ತು ಆಚಾರ್ಯರ ಭಾಗವತ ಪಾರತಂತ್ರ್ಯ ಮತ್ತು ಸರ್ವತಂತ್ರಸ್ವತಂತ್ರವೆಂಬ ಎರಡು ಗುಣಗಳನ್ನೂ ಪ್ರಖ್ಯಾಪನ ಮಾಡಿದ್ದಾರೆ.

ನಮ್ಮ ಸಿದ್ಧಾಂತದಲ್ಲಿ ಪರಮಾತ್ಮನಿಗಿಂತಲೂ, ಅವನ ಭಕ್ತರಿಗೆ ವಿಶೇಷಸ್ಥಾನವುಂಟು. ಪರಮಾತ್ಮನಲ್ಲಿ ಒಂದು ವೇಳೆ ಅಪರಾಧಗಳು ಸಂಭವಿಸಿದರೂ ಪರಮಾತ್ಮನು ಅದನ್ನು ಕ್ಷಮಿಸುತ್ತಾನೆ. ಆದರೆ ಭಾಗವತರ ವಿಷಯದಲ್ಲಿ ಅಪರಾಧವನ್ನೆಸಗಿದರೆ, ಅದಕ್ಕೆ ತಕ್ಕ ಶಿಕ್ಷೆಯನ್ನನುಭವಿಸಿಯೇ ತೀರಬೇಕು. ಈ ತರಹದ ಭಾಗವತಾಪಚಾರದಿಂದ ಭಗವಂತನಲ್ಲಿ ಮಾಡಿದ ಶರಣಾಗತಿಯೂ ವಿಳಂಬಿಸಿ ಫಲಕೊಡುತ್ತದೆ. ಅದೂ ಅಲ್ಲದೆ ಭಗವಂತನಿಗೆ

ತನಗೆ ಪರಿಚರ್ಯೆ ಮಾಡುವುದಕ್ಕಿಂತಲೂ, ತನ್ನ ಭಕ್ತರ ಪರಿಚರ್ಯೆ ಮಾಡುವವರಲ್ಲಿ ವಿಶೇಷವಾದ ಸಂತೋಷವುಂಟಾಗುತ್ತದೆ.

"ಆರಾಧನಾನಾಂ ಸರ್ವೇಷಾಂ ವಿಷ್ಣೋರಾರಾಧನಂ ಪರಂ।
ತಸ್ಮಾತ್ಪರತರಂ ಪ್ರೋಕ್ತಂ ತದೀಯಾರಾಧನಂ ಸದಾ ॥"

ಆದುದರಿಂಲೇ, ಆಚಾರ್ಯರುಗಳೆಲ್ಲರೂ ಅವನ ಭಕ್ತರಿಗೆ ದಾಸನಾಗಿರು-ವಂತಹ ಸ್ಥಿತಿಯನ್ನೇ ತಮಗೆ ಪರಮಾತ್ಮನು ಅನುಗ್ರಹಿಸುವಂತೆ ಪ್ರಾರ್ಥಿ-ಸಿದ್ದಾರೆ. ನಮ್ಮಾಳ್ವಾರ್‌ರವರು 'ಅಡಿಯಾರ್ ಅಡಿಯಾರ್ ತಮ್ಮಡಿಯಾರ್ ಅಡಿಯಾರ್, ತಮಕ್ಕಡಿಯಾರ್ ಅಡಿಯಾರ್'–ಎಂದೂ, ಕುಲಶೇಖರಾಳ್ವಾರ್‌-ವರು 'ತತ್ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯ । ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರ ಲೋಕನಾಥ॥'–ಎಂದೂ, ಶ್ರೀಪರಾಶರಾಚಾರ್ಯರು 'ಸಂಸೃಜ್ಯತೇ ಯದಿಚದಾಸಜನಸ್ತ್ವದೀಯಃ। ಸಂಸಾರ ಏಷ ಭಗವನ್ನ ಪವರ್ಗ ಏವ' – ಎಂಬಲ್ಲಿಯೂ ಪ್ರಾರ್ಥಿಸಿರುವುದನ್ನು ಕಾಣಬಹುದು. ಆದುದರಿಂದಲೇ, ನಮ್ಮ ಆಚಾರ್ಯರು ಭಗವಂತನ ಆಜ್ಞಾನುಜ್ಞಾಕೈಂಕರ್ಯ ದಂತೆಯೇ ತಮ್ಮ ಕಾಲದಲ್ಲಿದ್ದ ಭಾಗವತರ ಆಜ್ಞಾನುಜ್ಞಾಕೈಂಕರ್ಯಗಳನ್ನೂ ನಡೆಸುತ್ತಾ ಭಾಗವತರ ಪಾರತಂತ್ರರಾಗಿದ್ದರು.

ಅಂತೆಯೇ, ಆಚಾರ್ಯರು ಲೌಕಿಕವಾದ ಸರ್ವತಂತ್ರಗಳಲ್ಲಿಯೂ ಪರಿ-ಪೂರ್ಣವಾದ ಪಾಂಡಿತ್ಯವನ್ನು ಪಡೆದವರಾಗಿದ್ದುದರಿಂದ, ಶ್ರೀರಂಗದಲ್ಲಿ ಬಿಜಯಮಾಡಿಸಿರುವ ಶ್ರೀರಂಗನಾಯಿಕಾ ಅಮ್ಮನವರು, ತಮ್ಮನ್ನು ಸಂದರ್ಶಿ-ಸಲು ಬಂದಿದ್ದ ಆಚಾರ್ಯರಿಗೆ, ಅಲ್ಲಿ ನೆರೆದಿದ್ದ ಅನೇಕ ವಿದ್ವನ್ಮಣಿಗಳ ಸಮ್ಮುಖದಲ್ಲಿ ಎಲ್ಲರಿಗೂ ತಿಳಿಯುವಂತೆ ಅಶರೀರವಾಣಿಯ ಮುಖಾಂತರ 'ಸರ್ವತಂತ್ರಸ್ವತಂತ್ರ'–ಎಂಬ ಬಿರುದನ್ನು ಅನುಗ್ರಹಿಸಿದರು. ಇವರ ಈ ಪಾಂಡಿತ್ಯವನ್ನು ಪರೀಕ್ಷಿಸಲು, ಒಂದೊಂದು ತಂತ್ರಗಳಲ್ಲಿಯೂ ಪರಿಣತರಾಗಿ ಗರ್ವದಿಂದ ದೌರ್ಮನಸ್ಯರಾಗಿರುವ ಅನೇಕರು ಇವರನ್ನು ಅನೇಕರೀತಿಯಲ್ಲಿ ಪರೀಕ್ಷಿಸಿದಾಗ, ಎಲ್ಲ ವಿಷಯದಲ್ಲಿಯೂ ಎಲ್ಲರಿಗೂ ಆಶ್ಚರ್ಯವಾಗುವಂತೆ ಪರಿಣತರಾಗಿ, ಸರ್ವತಂತ್ರಸ್ವತಂತ್ರವೆಂಬ ಬಿರುದನ್ನು ಅನ್ವರ್ಥವಾಗಿಸಿದರು.

ದೇಹಾವಸಾನದಲ್ಲಿ ಮುಕ್ತಿಯನ್ನು ಬೇಡಿ–ದೃಪ್ತಪ್ರಸನ್ನರಾದ, ಐಹಿಕ ಆಮುಷ್ಮಿಕ ಸುಖ ಸಂತೋಷಗಳನ್ನು ಅಪೇಕ್ಷಿಸುವ ಸಮಗ್ರ ಐಹಿಕ ಜೀವನಕ್ಕೆ ಆವಶ್ಯಕವಾದ ತಂತ್ರಗಳಲ್ಲಿಯೂ, ಆಮುಷ್ಮಿಕ ಜೀವನಕ್ಕೆ ಬೇಕಾದ ಪರಮಾತ್ಮನನ್ನು ಆಶ್ರಯಿಸಿ ಅವನ ಮುಖೋಲ್ಲಾಸವನ್ನು ಪಡೆಯಲು ಸಾಧನವಾದ ತಂತ್ರಗಳಲ್ಲಿಯೂ ನೈಪುಣ್ಯವೂ ಮತ್ತು ಭಾಗವತ ಪಾರತಂತ್ರ್ಯವೂ ಬಹಳ ಪ್ರಧಾನವಾದುದರಿಂದ, ಆಚಾರ್ಯರ 'ಸರ್ವತಂತ್ರ ಸ್ವತಂತ್ರತಾ' ಮತ್ತು 'ಭಾಗವತಪಾರತಂತ್ರ್ಯ'–ಎಂಬ ಎರಡು ಗುಣಗಳ ಅನುಸಂಧಾನದಿಂದ ನಾವೂ ಆ ಗುಣಗಳನ್ನು ಸ್ವಲ್ಪ ಮಟ್ಟಿಗಾದರೂ ಪಡೆಯಬಹುದೆಂದು, ಅವುಗಳನ್ನು ಕೀರ್ತಿಸಿ, ಅಂತಹ ಗುಣವುಳ್ಳ ಆಚಾರ್ಯರನ್ನು ಸರ್ವ ಕಾಲದಲ್ಲಿಯೂ ಮನಸ್ಸು ನಿರಂತರವಾಗಿ ಚಿಂತಿಸುವಂತಾಗಲೆಂದೂ ಆಶಿಸಿದ್ದಾರೆ.

'ಅಲಂಕಾರಪ್ರಿಯೋ ವಿಷ್ಣುಃ'–ಎಂದು ಹೇಳುವಂತೆಯೇ ವಿಷ್ಣುಭಕ್ತರೂ ಅಲಂಕಾರ ಪ್ರಿಯರೇ ಆಗಿರುತ್ತಾರೆ. ಪರಮಾತ್ಮನಿಗೆ ಎರಡು ತರಹದ ಪುಷ್ಪಗಳನ್ನು ಸುಲಭವಾಗರ್ಪಿಸಿ, ಅವನನ್ನು ಸಂತುಷ್ಟಗೊಳಿಸಿಬಹುದು. ಒಂದು ಬಾಹ್ಯ ಪ್ರಪಂಚದಲ್ಲಿ ದೊರಕುವ ಪ್ರಸಿದ್ಧವಾದ ಮಲ್ಲಿಗೆ ಸಂಪಿಗೆ ಮೊದಲಾದ ಪುಷ್ಪಗಳು. ಮತ್ತೊಂದು ಪಡೆಯಲು ಕಷ್ಟಸಾಧ್ಯವಾದ, ಆದರೆ ಭಕ್ತನ ದೇಹದಲ್ಲೇ ಇರುವ ಅಹಿಂಸಾ ಮೊದಲಾದ ಎಂಟು ವಿಧವಾದ ಆಂತರಿಕ ಪುಷ್ಪಗಳು ಬಾಹ್ಯಪುಷ್ಪಗಳು ಕಾಲಕ್ರಮವಾಗಿ ಬಾಡಿಹೋಗಿ ತನ್ನ ಸೌರಭವನ್ನೂ ಕಳೆದುಕೊಂಡು, ಮೊದಲು ಅಭಿಮಾನಕ್ಕೆ ಪಾತ್ರಗಳಾಗಿದ್ದರೂ ಕೊನೆಗೆ ದ್ವೇಷಕ್ಕೂ ಪಾತ್ರಗಳಾಗಿ ತಿರಸ್ಕೃತಗಳಾಗಬಹುದು. ಆದರೆ,

> "ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯ ನಿಗ್ರಹಃ ।
> ಸರ್ವಭೂತದಯಾಪುಷ್ಪಂ ಕ್ಷಮಾಪುಷ್ಪಂ ವಿಶೇಷತಃ ।
> ಶ್ಯಾನಿಃಪುಷ್ಪಂ ತಪಃಪುಷ್ಪಂ ಧ್ಯಾನಂಪುಷ್ಪಂ ತಥೈವಚ ।
> ಸತ್ಯಂ ಚಾಷ್ಟವಿಧಂ ಪುಷ್ಪಂ ವಿಷ್ಣೋಃ ಪ್ರೀತಿಕರಂ ಮಹತ್ ॥"

ಎಂದು ಹೇಳಲಾಗಿರುವ ಯಾವ ಒಂದು ಪ್ರಾಣಿಯ ವಿಷಯದಲ್ಲಿಯೂ ಹಿಂಸೆ ಮಾಡದಿರುವಿಕೆ, ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವಿಕೆ, ಸರ್ವ

ಪ್ರಾಣಿಗಳ ವಿಷಯದಲ್ಲಿಯೂ ದಯೆಯಿಂದ ಕೂಡಿರುವಿಕೆ, ವಿಶೇಷವಾಗಿ ನಮ್ಮಲ್ಲಿ ಅಪರಾಧವೆಸಗಿದವರಲ್ಲಿಯೂ ತಾಳ್ಮೆಯಿಂದ ಸಹನೆಯಿಂದಿರುವಿಕೆ, ಪ್ರಸನ್ನ ಚಿತ್ತನಾಗಿರುವಿಕೆ, ಪರಮಾತ್ಮನನ್ನು ಅಥವಾ ಆಚಾರ್ಯರನ್ನೂ ಪೂರ್ಣತಯಾ ಎಂದು ಸಾಕ್ಷಾತ್ಕರಿಸುವೆನೋ ಎಂದು ಹಂಬಲಿಸುವಿಕೆ, ಪರಮಾತ್ಮನ ಅಥವಾ ಆಚಾರ್ಯರ ದಿವ್ಯಮಂಗಳ ವಿಗ್ರಹವನ್ನು ಧ್ಯಾನಿಸುವಿಕೆ ಮತ್ತು ಯಾರಿಗೂ ತೊಂದರೆಯನ್ನುಂಟುಮಾಡದೆ (ನ ಬ್ರೂಯಾತ್ ಸತ್ಯಮ-ಪ್ರಿಯಂ) ನಿಜಸ್ಥಿತಿಯನ್ನೇ ಅರುಹುವಿಕೆ—ಎಂಬ ಎಂಟು ವಿಧವಾದ ಪುಷ್ಪಗಳು ಪರಮಾತ್ಮನಿಗೂ ತದೀಯರಿಗೂ ಬಹಳ ಸಂತೋಷದಾಯಕವಾಗಿರುವುದು. ಈ ಪುಷ್ಪಗಳು ದಿನದಿನವೂ ಅಧಿಕವಾದ ಸೌರಭವನ್ನು ಹೊಂದಿ, ಅದನ್ನು ಹೊಂದಿರುವವರಿಗೆ ದಿವ್ಯ ತೇಜಸ್ಸನ್ನೀಯುತ್ತವೆ. ಈ ಮೇಲೆ ಹೇಳಿದ ಎಂಟು ವಿಧವಾದ ಗುಣಗಳೆಂಬ ಪುಷ್ಪಗಳ ಸಮೂಹವನ್ನು ಹೊಂದಿರುವ ಮನಸ್ಸೇ ಒಂದು ಪುಷ್ಪಗುಚ್ಛವೆಂದೂ, ಈ ಪುಷ್ಪಗುಚ್ಛವು ಅಂದರೆ ಮನಸ್ಸು ಸದಾ ಆಚಾರ್ಯರ ದಿವ್ಯ ಮಂಗಳ ವಿಗ್ರಹವನ್ನು ಸೇರುವುದರಲ್ಲಿ, ಅಂದರೆ ಸದಾ ಧ್ಯಾನಮಾಡುವುದರಲ್ಲಿ ಕುತೂಹಲವನ್ನು ಹೊಂದಲಿ ಎಂದು ಪ್ರಾರ್ಥಿಸಿದ್ದಾರೆ.

**ಶ್ರೀವಾದಿಹಂಸಾಂಬುದ ದೇಶಿಕೇಂದ್ರ-**
**ಪಾದಾಂಬುಜದ್ವಂದ್ವ ಪರಾಗದೈವತಮ್ ।**
**ಶ್ರೀ ವೆಂಕಟೇಶಂ ಗುರುಸಾರ್ವಭೌಮಂ**
**ಚೇತಶ್ಚಿರಂ ಭಾವಯ ಸೌಮ್ಯರೂಪಮ್ ॥೨॥**

**ಶ್ರೀ ವಾದಿಹಂಸಾಬುದದೇಶಿ ಕೇಂದ್ರ ಪಾದಾಂಬುಜ ದ್ವಂದ್ವ ಪರಾಗ ದೈವತಮ್**—ಶ್ರೀ ವಾದಿಹಂಸಾಬುದಾಚಾರ್ಯರ ಎರಡು ಪಾದರವಿಂದಗಳ ಪರಾಗ (ಪಾದ ಧೂಳಿನಿಂದ) ಪ್ರಕಾಶಿಸುತ್ತಿರುವ, **ಗುರುಸಾರ್ವಭೌಮಂ**—ಗುರುಗಳ ಪರಂಪರೆಯಲ್ಲಿಯೇ ಚಕ್ರವರ್ತಿಯಂತಿರುವ, **ಶ್ರೀ ವೆಂಕಟೇಶಂ**—ಶ್ರೀ ಮದ್ವೇಂಕಟನಾಥರ, **ಸೌಮ್ಯರೂಪಂ**—ಪ್ರಸನ್ನವಾದ ರೂಪವನ್ನು **ಹೇ ! ಚೇತಃ**—ಎಲೈ ಮನಸ್ಸೇ !, **ಚಿರಂ**—ನಿರಂತರವಾಗಿ, **ಭಾವಯ**—ನೀನು ಧ್ಯಾನಿಸುತ್ತಿರು.

ಶ್ರೀಮದಾಚಾರ್ಯರ ಗುರುಗಳು 'ವಾದಿಹಂಸಾಂಬುದಾಚಾರ್ಯರು' ಅಥವಾ 'ಅಪ್ಪುಳ್ಳಾರ್'-ಎಂಬುವರು. ಇವರು ಸಾಕ್ಷಾತ್ ಗರುಡನ ಅವತಾರ ವೆಂದೂ ಹೇಳುತ್ತಾರೆ. ಇವರ ಅನುಗ್ರಹದಿಂದಲೇ, ಆಚಾರ್ಯರು ಗರುಡ ಮಂತ್ರೋಪದೇಶವನ್ನು ಪಡೆದು, ಅದರ ಪುರಶ್ಚರಣೆಯಿಂದ ಗರುಡನನ್ನು ಸಾಕ್ಷಾತ್ತಾಗಿ ಸಂದರ್ಶಿಸಿ, ಅವನಿಂದಲೇ ಹಯಗ್ರೀವ ಮಂತ್ರೋಪದೇಶವನ್ನು ಪಡೆದು, ಸರ್ವ ವಿದ್ಯೆಗಳಲ್ಲಿ ಪಾಂಡಿತ್ಯವನ್ನೂ ಪಡೆದು ಪ್ರಕಾಶಿಸಿದರು.

ಈ ರೀತಿ ಇವರು ಪ್ರಸಿದ್ಧರಾಗಲು ಕಾರಣರಾದ ತಮ್ಮ ಆಚಾರ್ಯರಲ್ಲಿ **'ಆಚಾರ್ಯಾದಿಹದೇವತಾಂ ಸಮಧಿಕಾಂ ಅನ್ಯಾಂ ನ ಮನ್ಯಾಮಹೇ'**-ಎಂದು ತಾವೇ ಹೇಳಿರುವಂತೆ, ಭಗವಂತನಲ್ಲಿರುವುದಕಿಂತಲೂ ಮಿಗಿಲಾದ ಸುದೃಢವಾದ ಭಕ್ತಿಯನ್ನು ತಾಳಿ, ಪ್ರತಿನಿತ್ಯವೂ ಅವರ ಅಡಿದಾವರೆಗಳನ್ನು ಹಿಡಿದುಕೊಂಡು, ಅವುಗಳ ಮೇಲೆ ತಮ್ಮ ಶಿರಸ್ಸನ್ನಿಟ್ಟು ನಮಿಸುತ್ತಿದ್ದರು. ಈ ರೀತಿ ನಮಿಸುವಲ್ಲಿ ಅವರ ಪಾದಧೂಳು ಇವರ ಶಿರಸ್ಸಿಗೆ ಅಂಟಿಕೊಳ್ಳುತ್ತಿದ್ದಿತು.

**"ಸಮಸ್ತಸಂಪತ್ ಸಮವಾಪ್ತಿಹೇತವಃ ಸಮುತ್ಥಿತಾಪತ್ಕುಲ-**
**ಧೂಮಕೇತವಃ ।**
**ಅಪಾರಸಂಸಾರ ಸಮುದ್ರಸೇತವಃ ಪುನಂತುಮಾಂ ಬ್ರಾಹ್ಮಣ-**
**ಪಾದಪಾಂಸವಃ ॥"**

"ಸರ್ವ ವಿಧವಾದ ಐಹಿಕಾಮುಷ್ಮಿಕಸಂಪತ್ತನ್ನೂ ಹೊಂದಲು ಕಾರಣ ವಾದ, ಭಕ್ತರ ವಿಪತ್ತುಗಳ ಪರಂಪರೆಗೆ ಧೂಮಕೇತುವಿನಂತಿರುವ, ದಡವೇ ಕಾಣದಿರುವ ಸಂಸಾರ ಸಾಗರವನ್ನು ದಾಟಲು ಸೇತುವೆಯಂತಿರುವ, ಬ್ರಾಹ್ಮಣರ ಪಾದಧೂಳಿಗಳು ನನ್ನನ್ನು ಪವಿತ್ರಗೊಳಿಸಲಿ" — ಎಂದು ಮಾರ್ಕಂಡೇಯ ಸ್ಮೃತಿಯ ಶ್ರಾದ್ಧ ಪ್ರಕರಣದಲ್ಲಿ ಹೇಳಿರುವಂತೆ, ಶ್ರೀಮದಾಚಾರ್ಯರಿಗೆ ಅವರ ಗುರುಗಳ ಪಾದಧೂಳಿಯು ತಮ್ಮ ಶಿರಸ್ಸಿನಲ್ಲಿ ಧರಿಸುತ್ತಿದ್ದುದರಿಂದಲೇ, ಐಹಿಕವಾಗಿ ವಿದ್ಯೆ, ಕೀರ್ತಿ, ಆಚಾರ್ಯಪೀಠ, ಅನೇಕ ಬಿರುದಾವಳಿಗಳು, ಆತ್ಮಗುಣಪೂರ್ಣತೆ ಮೊದಲಾದ ಐಹಿಕ

ಶ್ರೀಯೊಡನೆ, ಮೋಕ್ಷಸಾಮ್ರಾಜ್ಯವೇ ಕೈವಶವಾಗಿ, ಇವರನ್ನಾಶ್ರಯಿಸುವವರೆಲ್ಲರಿಗೂ ಮೋಕ್ಷಸಾಮ್ರಾಜ್ಯವನ್ನನುಗ್ರಹಿಸುವ ಸ್ಥಿತಿಯುಂಟಾಗಿ ಸರ್ವ ವಿಧದಲ್ಲಿಯೂ ಪ್ರಕಾಶಿಸುವಂತಾದರು.

ದೇಶದಲ್ಲಿನ ಎಲ್ಲರಾಜರನ್ನೂ ಗೆದ್ದು, ಇಡೀದೇಶಕ್ಕೆ ಚಕ್ರವರ್ತಿ–ಯಾಗಿರುವವನನ್ನು 'ಚಕ್ರವರ್ತಿ'-'ಸಾರ್ವಭೌಮ' – ಎನ್ನುತ್ತಾರೆ. ಅಂಧಕಾರವನ್ನು ಹೋಗಲಾಡಿಸುವವನನ್ನು 'ಗುರು' ಎನ್ನುತ್ತಾರೆ.

"ಗುಶಬ್ದಸ್ತ್ವಂಧಕಾರಸ್ಸ್ಯಾತ್ ರುಶಬ್ದಸ್ತನ್ನಿರೋಧಕಃ |
ಅಂಧಕಾರ ನಿರೋಧಿತ್ವಾತ್ ಗುರುರಿತ್ಯಭಿಧೀಯತೇ ||"

ಅಂದರೆ, ತಮ್ಮ ಜ್ಞಾನಬೋಧೆಯಿಂದ ಶಿಷ್ಯರ ಅಜ್ಞಾನವೆಂಬ ಕಗ್ಗತ್ತಲನ್ನು ಹೋಗಲಾಡಿಸುವವರು ಗುರುಗಳು. ಅನೇಕರು 'ಗುರು' ಪೀಠವನ್ನು ಮಾತ್ರ ಅಲಂಕರಿಸಿ, ಗುರು ಎನಿಸಿಕೊಂಡು, ವೇದಮಂತ್ರಗಳಿಗೆ ಅಪಾರ್ಥವನ್ನು ಕಲ್ಪಿಸಿ, ಇಡೀ ಚೇತನವರ್ಗವೇ ತತ್ತ್ವಾರ್ಥವನ್ನರಿಯದೆ ಅಜ್ಞಾನದಲ್ಲಿ ಮುಳುಗುವಂತಾಗಿದ್ದ ಸಂದರ್ಭದಲ್ಲಿ, ಶ್ರೀಮದಾಚಾರ್ಯರು-'ಶತದೂಷಿಣಿ' 'ಪರಮತಭಂಗ'–ಮೊದಲಾದ ಗ್ರಂಥಗಳ ಮುಖಾಂತರ ವೇದವಿರುದ್ಧವಾದ ಸರ್ವಮತವನ್ನೂ ಖಂಡಿಸಿ, ಚೇತನ ವರ್ಗಕ್ಕೆ ತತ್ವಬೋಧೆಯನ್ನು ಮಾಡಿ ಅಜ್ಞಾನಾಂಧಕಾರವನ್ನು ಹೋಗಲಾಡಿಸಿ, ವೇದಾಂತದರ್ಶನವನ್ನು ಸ್ಥಾಪಿಸಿ ರಕ್ಷಿಸಿದರು. ಆದುದರಿಂದಲೇ ಇವರು 'ಗುರುಸಾರ್ವಭೌಮ'ರಾದರು.

"ನಹ್ಯಮ್ಮಯಾನಿತೀರ್ಥಾನಿ ನದೇವಾಮೃಚ್ಛಿಲಾಮಯಾಃ |
ತೇ ಪುನಂತ್ಯುರು ಕಾಲೇನ ದರ್ಶನಾದೇವ ಸಾಧವಃ ||"

'ಜಲಮಯವಾಗಿರುವ ತೀರ್ಥಕ್ಷೇತ್ರಗಳು (ತಮ್ಮಲ್ಲಿ ಸ್ನಾನಮಾಡುವವರನ್ನೂ), ಮೃಣ್ಮಯ ಮತ್ತು ಶಿಲಾಮಯವಾದ ಭಗವಂತನ ಮೂರ್ತಿಗಳು (ತಮ್ಮನ್ನು ದರ್ಶನ ಮಾಡುವವರನ್ನೂ) ಬಹಳ ಕಾಲವಾದ ಬಳಿಕ ಪವಿತ್ರಗೊಳಿಸಿ ರಕ್ಷಿಸುತ್ತವೆ. ಆದರೆ, ಸಾಧುಗಳ ದರ್ಶನವಾದರೋ, ಕೂಡಲೆ ದರ್ಶನ ಮಾಡಿದವರನ್ನೂ ಪವಿತ್ರಗೊಳಿಸಿ ರಕ್ಷಿಸುತ್ತವೆ'. – ಎಂದು ಹೇಳುವಂತೆ

'ಈ ಆಚಾರ್ಯರ ಮೂರ್ತಿಯನ್ನು ನಾವು ಸಂದರ್ಶಿಸಿದ ಕೂಡಲೇ ನಮ್ಮ ಪಾಪಗಳು ತೊಲಗುತ್ತವೆ' – ಎಂಬ ಅರ್ಥವನ್ನೀಯುವ 'ವೆಂಕಟನಾಥ' ಎಂಬ ಹೆಸರನ್ನನ್ವರ್ಥಿಸುವವರಾಗಿದ್ದಾರೆ ಆಚಾರ್ಯರು. (**ವೇಂಪಾಪಂ ಕಟಯತಿ ನಾಶಯತಿ ಇತಿ ವೇಂಕಟಃ । ವೇಂಕಟಶ್ಚಾಸೌನಾಥಶ್ಚ– ವೇಂಕಟನಾಥಃ ।**)

'ರೂಪಮೇವಾಸ್ಯೈತನ್ಮಹಿಮಾನಂ ವ್ಯಾಚಷ್ಟೇ'–ಎಂಬಂತೆ, ಸದಾ ಪರಮಾತ್ಮನನ್ನು ಶಾಂತಮನಸ್ಕರಾಗಿ ಧ್ಯಾನಿಸುತ್ತಿರುವುದರಿಂದ ಸೌಮ್ಯ ರೂಪದಿಂದ ಕೂಡಿದ್ದಾರೆ. ಈ ಮೇಲೆ ಹೇಳಿದಂತೆ ಮಹಿಮಾನ್ವಿತರಾದ ಆಚಾರ್ಯರ ದಿವ್ಯ ಮಂಗಳ ವಿಗ್ರಹವನ್ನು ಮನಸ್ಸು ನಿರಂತರವಾಗಿ ಚಿಂತಿಸಲಿ ಎಂದು ಈ ಶ್ಲೋಕದಲ್ಲಿಯೂ ಪ್ರಾರ್ಥಿಸಿದ್ದಾರೆ.

**ಶ್ರೀಮತ್ತ್ರಯಿಶೇಖರದೇಶಿಕಸ್ಯ ಶ್ರೀವೇಂಕಟೇಶಸ್ಯ ವಪುರ್ಮನೋಜ್ಞಂ ।**
**ಆದಿತ್ಯವರ್ಣಂ ವಿಶದಂಮಹಾಕ್ಷ್ಣೋಃಅಪಾದಚೂಡಾಪದಮಾವಿರಸ್ತು ॥**

**ಶ್ರೀಮತ್ತ್ರಯೀಶೇಖರ ದೇಶಿಕಸ್ಯ**–ಶ್ರೀಮದ್ವೇದಾಂತಾಚಾರ್ಯರಾದ **ಶ್ರೀವೇಂಕಟೇಶಸ್ಯ**–ಶ್ರೀವೇಂಕಟನಾಥರ, **ಆದಿತ್ಯವರ್ಣಂ** – ಸೂರ್ಯನ ಕಾಂತಿಯಿಂದ ಕಂಗೊಳಿಸುವ, **ವಿಶದಂ**-ಸ್ವಚ್ಛವಾದ, **ಮನೋಜ್ಞಂ**-ರಮಣೀಯವಾದ, **ಅಪಾದಚೂಡಾಪದಂ**–ಅಡಿಯಿಂದ ಮುಡಿಯವರೆಗಿನ, **ವಪುಃ**-ದಿವ್ಯಮಂಗಳ ವಿಗ್ರಹವು, **ಮಹಾಕ್ಷ್ಣೋಃ**–ಮಹಿಮಾನ್ವಿತವಾದ ನಮ್ಮ ಕಣ್ಣುಗಳಿಗೆ, **ಆವಿರಸ್ತು**–ನಿರಂತರವಾಗಿ ಕಾಣಿಸುತ್ತಿರಲಿ.

ನಮ್ಮ ಆಚಾರ್ಯರು ಸದಾ ಭಗವದ್ಭಾಗವತರ ನಿತ್ಯ ಕೈಂಕರ್ಯಶ್ರೀ–ಯನ್ನು ಹೊಂದಿ ಜ್ಞಾನಸಂಪತ್ಸಮೃದ್ಧರಾಗಿದ್ದರು. ಆದುದರಿಂದ 'ಶ್ರೀಮಾನ್' ಎಂಬ ಶಬ್ದವು ಅವರಿಗೆ ಅನ್ವರ್ಥವಾಗಿದ್ದಿತು.

ವೇದಗಳು-ಆದಿಭೌತಿಕ, ಆಧಿದೈವಿಕ ಮತ್ತು ಆಧ್ಯಾತ್ಮಿಕಗಳೆಂಬ ಮೂರು ವಿಧವಾದ ಅರ್ಥಗಳನ್ನು ಪ್ರತಿಮಂತ್ರಗಳಲ್ಲಿ ಕೊಡುವುದರಿಂದ 'ತ್ರಯೀ'—ಎಂಬ ಹೆಸರಿನಿಂದ ಕರೆಯಲ್ಪಡುತ್ತವೆ. ವೇದಗಳನ್ನು ಸಂಹಿತಾ

ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್‌ಗಳೆಂದು ವಿಭಜಿಸಿದ್ದಾರೆ. ವೇದ ಮಂತ್ರಗಳ ಸಂಕಲನವೇ–ಸಂಹಿತಾ, ಅವುಗಳನ್ನು ಯಾವ ಯಾವ ಪ್ರಕರಣ ಗಳಲ್ಲಿ ವಿನಿಯೋಗಿಸಬೇಕೆಂಬ ಸೂಚನೆಯನ್ನು ಕೊಡುವ ಭಾಗವೇ ಬ್ರಾಹ್ಮಣ. ವಾನಪ್ರಸ್ಥರೂ ಮತ್ತು ಸನ್ಯಾಸಿಗಳೂ ವಿಶೇಷವಾಗಿ ಆರಣ್ಯಗಳಲ್ಲಿದ್ದು, ಪರಮಾತ್ಮನ ಉಪಾಸನೆಯನ್ನು ಮಾಡುವ ಕ್ರಮವನ್ನು ತಿಳಿಸುವ ಭಾಗವೇ ಆರಣ್ಯಕ. ಜೀವಾತ್ಮ ಪರಮಾತ್ಮರ ಸ್ಥಿತಿಗತಿಗಳು ಸ್ವರೂಪ, ಸ್ವಭಾವ, ಪ್ರಪಂಚದ ಸೃಷ್ಟಿ ಸ್ಥಿತಿಲಯಗಳೂ ಮತ್ತು ಈ ಎಲ್ಲಕ್ಕೂ ಕರ್ತೃವಾದ ಪರಮಾತ್ಮನ ವೈಭವ-ಕಲ್ಯಾಣಗುಣ ಮೊದಲಾದುವನ್ನು ತಿಳಿಸುವ ಭಾಗವೇ ಉಪನಿಷತ್. ಸಂಹಿತಾ ಬ್ರಾಹ್ಮಣಗಳು ಪರಮಾತ್ಮನನ್ನು ಯಜ್ಞಯಾಗ ಗಳ ಮುಖಾಂತರ ಪೂಜಿಸುವ ಕ್ರಮವನ್ನು ತಿಳಿಸುವುದರಿಂದ 'ಕರ್ಮ ಕಾಂಡ' ಅಥವಾ 'ಆರಾಧನಾಕಾಂಡ'ವೆಂದೂ, ಆರಣ್ಯಕ ಮತ್ತು ಉಪನಿಷತ್ತು ಗಳು ಆರಾಧ್ಯನಾದ ಪರಮಾತ್ಮ ಗುಣವಿಭವಾದಿಗಳನ್ನು ವಿಶೇಷವಾಗಿ ತಿಳಿಸುವುದರಿಂದ 'ಜ್ಞಾನಕಾಂಡ' ಅಥವಾ 'ಆರಾಧ್ಯಕಾಂಡ'ವೆಂದೂ ಕರೆಯುತ್ತಾರೆ. ಇದರಲ್ಲಿ ಕರ್ಮಕಾಂಡವು ಉಪದೇಶಕ್ಕಿಂತಲೂ ಮಿಗಿಲಾಗಿ ಅನುಷ್ಠಾನದಿಂದ ಅರಿಯುವಂತಹುದು. ಜ್ಞಾನಕಾಂಡವು ಅನುಷ್ಠಾನ ದೊಡನೆ ಉಪದೇಶ ಪ್ರಧಾನವಾಗಿ ಅರಿಯುವಂತಹುದು. ವೇದಗಳ ಕೊನೆಯ ಭಾಗವಾದ ಉಪನಿಷತ್ತುಗಳನ್ನು ವೇದಶಿರಸ್, ವೇದಚೂಡ, ವೇದಾಂತ ಇತ್ಯಾದಿ ಶಬ್ದಗಳಿಂದಲೂ ವ್ಯವಹರಿಸುತ್ತಾರೆ.

"ಆಚಿನೋತಿ ಹಿ ಶಾಸ್ತ್ರಾಣಿ ಆಚಾರಂ ಸ್ಥಾಪಯತ್ಯಪಿ ।
ಸ್ವಯ ಮಾಚರತೇ ಯಸ್ಮಾತ್ ತಸ್ಮಾದಾಚಾರ್ಯಮಾನ್ಪವೇತ್ ॥"

'ಯಾರು ವೇದವಿಹಿತವಾದ ಆಚಾರ-ಅನುಷ್ಠಾನ-ವಿಚಾರಗಳನ್ನು ಇದೇ ರೀತಿ ನಡೆಯಿಸಬೇಕೆಂದು ಗ್ರಂಥಗಳ ಮುಖಾಂತರ ವ್ಯವಸ್ಥೆಮಾಡಿರು ತ್ತಾರೆಯೋ, ಉಪದೇಶಿಸುತ್ತಾರೆಯೋ ಮತ್ತು ಸ್ವತಃ ತಾನು ಅನುಷ್ಠಾನ ಮಾಡಿತೋರಿಸುತ್ತಾರೆಯೋ·ಅವರೇ 'ಆಚಾರ್ಯ'·ಎಂಬ ಪದಕ್ಕೆ ಅರ್ಹರು'– ಎಂದು ಹೇಳುವಂತೆ, ನಮ್ಮ ಆಚಾರ್ಯರು ಪೂರ್ಣವಾಗಿ ಸಾಂಗವಾಗಿ ವೇದಾಧ್ಯಯನ ಮಾಡಿ, ಅದರಲ್ಲಿ ಬೋಧಿತವಾದ ನಿತ್ಯನೈಮಿತ್ತಿಕ ಕರ್ಮ–

ಗಳನ್ನು ಸುಷ್ಟಿಸುತ್ತಾ, ವಿಶೇಷವಾಗಿ 'ಉಪನಿಷತ್' ಅಥವಾ 'ವೇದಾಂತ' ಭಾಗಗಳಲ್ಲಿ ಪ್ರತಿಪಾದ್ಯನಾದ ಭಗವಂತನನ್ನು ಉಪಾಸಿಸಿ, ಸಾಕ್ಷಾತ್ಕರಿಸಿ, ಅನೇಕ ಶಿಷ್ಯಪ್ರಶಿಷ್ಯ ಪರಂಪರೆಗೆ ತಮ್ಮ ಗ್ರಂಥಗಳಿಂದ ಭೋಧನೆಯನ್ನು ಮಾಡಿರುವುದರಿಂದ 'ವೇದಾಂತಾಚಾರ್ಯ'– 'ವೇದಾಂತದೇಶಿಕ'—ಇತ್ಯಾದಿ ಅನ್ವರ್ಥವಾದ ಬಿರುದಾಂಕಿತರಾಗಿದ್ದಾರೆ.

ಹಿಂದಿನ ಶ್ಲೋಕದ ವಿವರಣೆಯಲ್ಲಿಯೇ ತಿಳಿಸಿರುವಂತೆ ವೇಂಕಟನಾಥ ಅಥವಾ ವೇಂಕಟೇಶ ಶಬ್ದವಾಚ್ಯರಾದ, ನಮ್ಮ ಆಚಾರ್ಯರು, 'ಆದಿತ್ಯವರ್ಣಂ ತಮಸಃ ಪರಸ್ತಾತ್'–ಎಂದು ಶ್ರುತಿಯು ಉದ್ಘೋಷಿಸುವ ಆದಿತ್ಯವರ್ಣನಾದ ಪರಮಾತ್ಮನನ್ನು ವಿಶೇಷವಾಗಿ ತನ್ನ ಹೃದಯ ಕಮಲದಲ್ಲಿ ಉಪಾಸನೆ ಮಾಡಿರುವುದರಿಂದ, ಆ ಪರಮಾತ್ಮನ ಕಾಂತಿಯು ವಿಶೇಷವಾಗಿ ಇವರ ದಿವ್ಯ ದೇಹದಲ್ಲಿಯೂ ಹೊರಗಡೆ ಪ್ರಕಾಶಮಯವಾದ ತೇಜಸ್ಸಿನಿಂದ ಕಾಣಿಸುತ್ತದೆ. ಆದುದರಿಂದಲೇ ಇವರ ದೇಹವು ಅಡಿಯಿಂದ ಮುಡಿಯವರೆವಿಗೂ ರಮಣೀಯ ವಾಗಿಯೂ ಮತ್ತು ಸ್ವಚ್ಛವಾಗಿಯೂ ಇದೆ. ನಮ್ಮ ಕಣ್ಣಿನಿಂದ ಇಂತಹ ಮಹಿಮಾನ್ವಿತರಾದ ಆಚಾರ್ಯರ ದಿವ್ಯ ಮಂಗಳ ವಿಗ್ರಹವನ್ನು ನಿರಂತರವಾಗಿ ಸಂದರ್ಶಿಸಬೇಕೆಂಬ ಬಯಕೆಯೇ, ನಮ್ಮ ಕಣ್ಣುಗಳ ಒಂದು ಮಹತ್ವವನ್ನು ಸೂಚಿಸುತ್ತವೆ. ಈ ರೀತಿ ಮಹತ್ವವನ್ನು ಹೊಂದಿದ ನಮ್ಮ ಕಣ್ಣುಗಳಿಂದ ನಿರಂತರವಾಗಿ, ವೇದಾಂತದೇಶಿಕರೆಂಬ ವೆಂಕಟನಾಥರ ನಖಶಿಖಾಂತ ವ್ಯಾಪಿಸಿರುವ ಸ್ವಚ್ಛವಾದ ಮತ್ತು ರಮಣೀಯವಾದ ದಿವ್ಯಮಂಗಳ ವಿಗ್ರಹವು ಸಾಕ್ಷಾತ್ಕರಿಸುವಂತಾಗಲಿ—ಎಂದು ಈ ಶ್ಲೋಕದಲ್ಲಿ ಆಶಿಸಿದ್ದಾರೆ.

ನಿರ್ನಿದ್ರಪಂಕೇರುಹಯುಗ್ಮ ಶೋಭಾನಿರಾಕೃತಿ ಪ್ರೌಢಪದಾಬ್ಜಯುಗ್ಮಂ।
ನೀರಂಧ್ರನಿರ್ಯನ್ನಖಚಂದ್ರಚಂದ್ರಾತಪಸ್ಫುಟದ್ಧ್ಯಾತೃ ಹೃದಂಧಕಾರಂ ॥

ಧ್ಯಾತೃಹೃದಂಧಕಾರಂ = (ಆಚಾರ್ಯರ ಪಾದಗಳನ್ನು) ಧ್ಯಾನ ಮಾಡುವವರ ಹೃದಯಾಂಧಕಾರಕ್ಕೆ, ನೀರಂಧ್ರನಿರ್ಯನ್ನಖಚಂದ್ರಚಂದ್ರಾತಪಸ್ಫುಟತ್ = (ಚಂದ್ರನೋಪಾದಿಯಲ್ಲಿರುವ ಕಾಲು ಬೆರಳುಗಳ ಉಗುರುಗ- ಳಿಂದ) ನಿರಂತರವಾಗಿ ಹೊರಹೊಮ್ಮುವ ಕಾಂತಿಯಿಂದ ಪ್ರಕಾಶಿಸುವ

ಬೆಳದಿಂಗಳಿನೋಪಾದೆಯಲ್ಲಿರುವ, ನಿರ್ನಿದ್ರಹಂಕೇರುಹಯುಗ್ಮಶೋಭಾ= ಅರಳಿರುವ ಕಮಲದ ಜೋಡಿಗಳ ಕಾಂತಿಯನ್ನೂ, ನಿರಾಕೃತಿ= ತಿರಸ್ಕರಿಸುವ, ಪ್ರೌಢಪದಾಬ್ಜಯುಗ್ಮಂ=ಪ್ರೌಢಿಮೆಯಿಂದ ಕೂಡಿರುವ (ಆಚಾರ್ಯರ) ಅಡಿದಾವರೆಗಳು (ಸದಾ ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ.)

ಪ್ರತಿ ಸಂವತ್ಸರದಲ್ಲಿಯೂ, ಯುಗಾದಿಯ ಮಾರನೆಯ ದಿನ ದ್ವಿತೀಯಾ ಚಂದ್ರ ದರ್ಶನಮಾಡುವುದು ಅನೇಕರಲ್ಲಿ ಸಂಪ್ರದಾಯವಿದೆ. ಇದರ ರಹಸ್ಯ ವಿಂತಿದೆ. (ಭಾಗವತಹನ್ನೊಂದನೆಯ ಸ್ಕಂದದಲ್ಲಿ) ಒಮ್ಮೆ ಶುಕ್ರಬ್ರಹ್ಮರೂ ಮತ್ತು ವ್ಯಾಸಮಹರ್ಷಿಗಳೂ ನದಿಯದಡದಲ್ಲಿ ಹೋಗುತ್ತಿರುತ್ತಾರೆ. ಅಂದು ಶುಕ್ಲಪಕ್ಷದ ದ್ವಿತೀಯೆ· ಒಂದು ಕಡೆ ಸೂರ್ಯಾಸ್ತವಾಗುತ್ತಿದೆ· ಮತ್ತೊಂದು ಕಡೆ ಚಂದ್ರೋದಯವಾಗುತ್ತಿದೆ. ಈ ಚಂದ್ರ ಎರಡೇ ಕಲೆಗಳಿಂದ ಕೂಡಿರು-ತ್ತಾನೆ. ಮತ್ತು ಕೆಲವೇ ಸಮಯ ಕಾಣಿಸುತ್ತಾನೆ. ದ್ವಿತೀಯಾ ದಿನ ದಂದು ಚಂದ್ರೊದಯವಾದ ಕೂಡಲೇ ಕೆಲವೇ ಸಮಯದಲ್ಲಿ ಸೂರ್ಯಾಸ್ತ-ಮಯವಾಗಿ ಬಿಸಲಿನ ಬೇಗೆಯು ನೀಗುತ್ತದೆ ಮತ್ತು ರಾತ್ರಿಯ ಅಂಧಕಾರವೂ ಚಂದ್ರನ ಬೆಳದಿಂಗಳಿಂದ ದೂರವಾಗುತ್ತದೆ. ಈ ರೀತಿಯ ಚಂದ್ರನನ್ನು ಕಂಡು ಶುಕಬ್ರಹ್ಮರು ನಮಿಸಿದರು. ವ್ಯಾಸಮಹರ್ಷಿಗಳು ಕಾರಣವನ್ನು ಕೇಳಲು, ಶುಕಬ್ರಹ್ಮರು ಹೇಳುತ್ತಾರೆ:

**"ಭಗವತಉರು ವಿಕ್ರಮಾಂಘ್ರಿಶಾಖಾನಮಣಿಚಂದ್ರಿಕಯಾನಿರಸ್ತತಾಪೇ।**
**ಹೃದಿಕಥಮುಪಸೀದತಾಂ ಪುನಸ್ಸಃ ಪ್ರಭವತಿ ಚಂದ್ರ ಇವೋದಿತೇಽ-**
**ರ್ಕತಾಪಃ ।।"**

ಪರಮಾತ್ಮನು ತ್ರಿವಿಕ್ರಮಾವತಾರ ಕಾಲದಲ್ಲಿ ತನ್ನ ಒಂದು ಪಾದವನ್ನು ಮೇಲಿನ ಲೋಕಗಳೆಲ್ಲವನ್ನೂ ಅಳೆಯಲೆಂದು ಚಾಚಿದಾಗ, ಅವನ ಪಾದದಲ್ಲಿದ್ದ ಉಗುರು, ದ್ವಿತೀಯಾ ಚಂದ್ರನಂತೆಯೇ ಮೇಲೆ ಕಾಣಿಸುತ್ತಿದ್ದಿತು. ಆದುದರಿಂದ ಯಾರೇ ಆಗಲಿ, ಈ ದ್ವಿತಿಯಾ ಚಂದ್ರ ದರ್ಶನ ಮಾಡುವಲ್ಲಿ, ಆ ತ್ರಿವಿಕ್ರಮನ ಪಾದದ ಉಗುರುಗಳನ್ನು ಸ್ಮರಿಸಿಕೊಂಡು, ತನ್ನ ಹೃದಯ ಕಮಲದಲ್ಲಿ ಅದನ್ನು ಧ್ಯಾನಿಸಿದರೆ, ಅವರ ಸಂಸಾರದ ತಾಪಗಳು ನೀಗುತ್ತವೆ ಮತ್ತು

ಹೃದಯದಲ್ಲಿರುವ ಅಜ್ಞಾನವೆಂಬ ಅಂಧಕಾರವೂ ತೊಲಗುತ್ತದೆ. ಆದುದರಿಂದಲೇ, ಪ್ರತಿಸಂವತ್ಸರದಲ್ಲಿಯೂ ಪ್ರಪ್ರಥಮವಾಗಿ ಕಾಣುವ ಈ ದ್ವಿತೀಯಾ ಚಂದ್ರದರ್ಶನ ಅವಶ್ಯವಾಗಿ ಕೆಲವು ಸಂಪ್ರದಾಯಗಳಲ್ಲಿ ಬಂದಿದೆ. ಅಂತೆಯೇ ಭಗವಂತನಿಗಿಂತಲೂ ಮಿಗಿಲಾದ ಮಹಿಮಾನ್ವಿತರಾದ ನಮ್ಮ ಆಚಾರ್ಯರ ಪಾದಗಳಲ್ಲಿನ ನಖಗಳನ್ನು ಧ್ಯಾನ ಮಾಡುವವನಿಗೆ ಹೃದಯದಲ್ಲಿನ ಅಜ್ಞಾನ ವೆಂಬ ಕತ್ತಲೆಯನ್ನು ಹೋಗಲಾಡಿಸುವಲ್ಲಿ, ಆ ನಖಗಳಿಂದ ಹೊರಹೊಮ್ಮುವ ಕಾಂತಿಯು ಬೆಳದಿಂಗಳಿನಂತಾಗಿ ಬೆಳಗುತ್ತದೆ.

ಪ್ರಾಕೃತಿಕವಾದ ಬಾಹ್ಯ ಪ್ರಪಂಚದಲ್ಲಿ ಕಾಣುವ (ಪಂಕೇರುಹ) ಕೆಸರಿನಿಂದ ಕೂಡಿದ ನೀರಿನಲ್ಲಿ ಉತ್ಪನ್ನವಾಗುವ ಕಮಲವು ಸೂರ್ಯೋದಯವಾಗುವಾಗ ಅರಳಿ ಕಂಗೊಳಿಸುತ್ತದೆ. ಸೂರ್ಯಾಸ್ತಮಯವಾದಾಗ ಮತ್ತೆ ಮೊಗ್ಗಾಗಿ ಕಾಂತಿಹೀನವಾಗುತ್ತದೆ. ಹಾಗೆಯೇ ಈ ಗ್ರಂಥದ ಮುನ್ನುಡಿಯಲ್ಲಿ ವಿವರಿಸಿರುವಂತೆ, ಯಾವುದಾದರೂ ಪ್ರಾಣಿಗಳಿಂದ ಕಮಲವು ನೀರಿನಿಂದ ಹೊರಗೆ ಕಿತ್ತೊಗೆದಾಗ ಸೂರ್ಯೋದಯವಾದರೂ ಬಾಡಿಹೋಗಿ ಕಾಂತಿಹೀನವಾಗಿ ಸೌರಭಹೀನವಾಗುತ್ತದೆ. ಆದರೆ ಸತ್ವರಜಸ್ತಮಗಳೆಂಬ ತ್ರಿಗುಣಾತ್ಮಕವಾದ ಪ್ರಕೃತಿಯಲ್ಲಿ ಉತ್ಪನ್ನವಾಗಿದ್ದರೂ, ಕೆಸರಿನಂತಿರುವ ರಜಸ್ತಮೋಗುಣಗಳನ್ನು ದೂರಮಾಡಿ ತಿಳಿಯಾದ ನೀರಿನಂತಿರುವ ಸತ್ವಗುಣಗಳಿಂದ ಶೋಭಿಸುತ್ತಿದ್ದು, ನಿರಂತರವಾಗಿ ಪ್ರವಹಿಸುವ ಭಗವಂತನ ಕರುಣಾಸ್ರೋತಸ್ಸಿನಲ್ಲಿ ಉತ್ಪನ್ನವಾಗಿ, ಭಗವಂತನ ಸಂಕಲ್ಪಸೂರ್ಯದಿಂದ ಅರಳಿ ಪ್ರಕಾಶಿಸುತ್ತಿರುವ ಆಚಾರ್ಯರ ಅಡಿದಾವರೆಗಳೆರಡೂ ಪ್ರಾಕೃತಿಕವಾದ ಕಮಲಕ್ಕಿಂತಲೂ ಅಧಿಕವಾದ ಮಹತ್ವ ಉಳ್ಳದುದಾಗಿ ಶೋಭಿಸುತ್ತದೆ. ಬಾಹ್ಯದ ಕಮಲವನ್ನರಳಿಸುವ ಸೂರ್ಯನು ಉದಯಿಸುವಂತೆಯೇ ಅಸ್ತನೂ ಆಗುತ್ತಾನೆ. ಆದರೆ ಆಚಾರ್ಯಪಾದಗಳೆಂಬ ಕಮಲವನ್ನರಳಿಸುವ, ಸತ್ಯಸಂಕಲ್ಪನಾದ ಭಗವಂತನ ಸಂಕಲ್ಪಸೂರ್ಯವಾದರೋ ಒಮ್ಮೆ ಉದಯಿಸಿದರೆ, ಅಸ್ತವೇ ಆಗುವುದಿಲ್ಲ, ಪ್ರಾಕೃತಿಕ ಕಮಲವನ್ನು ನೀರಿನಿಂದ ಕಿತ್ತೊಗೆಯಬಹುದು, ಅಥವಾ ನೀರೇ ಬತ್ತಿಹೋಗಬಹುದು. ಅದರಿಂದಲೇ ಹೂವು ಬಾಡಿಹೋಗುತ್ತದೆ. ಆದರೆ ನಮ್ಮ ಆಚಾರ್ಯಪಾದಾಂಬುಜಗಳು ನಿರಂತರವಾಗಿ ಎಂದೆಂದೂ

ಎಲ್ಲೆಲ್ಲಿಯೂ ಪ್ರವಹಿಸುತ್ತಿರುವ ಪರಮಾತ್ಮನ ಕರುಣಾಸ್ರೋತಸ್ಸಿನಲ್ಲಿ ಉದಯಿಸಿರುವುದರಿಂದ, ತೀರ್ಥದಿಂದ ದೂರವಾಗಲು ಸಾಧ್ಯವೇ ಇಲ್ಲ. ಆದುದರಿಂದ ಬಾಡಿಹೋಗುವ ಪ್ರಸಂಗವೇ ಇಲ್ಲ. ಈ ಎಲ್ಲ ಕಾರಣಗಳಿಂದ ಪ್ರಾಕೃತಿಕ ಕಮಲದ್ವಯದ ಕಾಂತಿಯನ್ನೂ ತಿರಸ್ಕರಿಸುವ ಕಾಂತಿಯುಕ್ತವಾದ ಆಚಾರ್ಯರ ಪಾದಾಂಬುಜಗಳೆರಡೂ ನಿರಂತರವಾಗಿ ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ–ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿರುತ್ತಾರೆ.

**ಅನಂಗಸೌವರ್ಣ ನಿಷಂಗಕಾಂತಿ ಪ್ರಸಂಗಭಂಗಾವಹಚಾರುಜಂಘಂ |**
**ಲಸತ್ಕಕುದ್ಮತ್ಕಕುಕುದಾಭಿರೂಪ್ಯಂ ನಿತಾಂತನಿರ್ಭಾಸಿತ ಜಾನುಯುಗ್ಮಂ ||**

ಅನಂಗ–ಮನ್ಮಥನ, ನಿಷಂಗ- ಬತ್ತಳಿಕೆಯಂತೆ, ಸೌವರ್ಣಕಾಂತಿ-ಚಿನ್ನದ ಹೊಳಪಿನಿಂದಕೂಡಿ, ಪ್ರಸಂಗ–ಸುತ್ತಲೂ ವ್ಯಾಪಿಸಿ, ಭಂಗ-ಬಗ್ಗಿ ಹಿಂದಕ್ಕೆ ಹೆಣೆದುಕೊಂಡಿರುವುದರಿಂದಲೇ, **ಆವಹಚಾರು ಜಂಘಂ**–ಸೌಂದರ್ಯವನ್ನು ಹೊಂದಿಸುವ ಮೀನಖಂಡಗಳಿಂದ ಕೂಡಿದ, **ಲಸತ್ಕಕುದ್ಮತ್**– ಗೂಳಿಯ ಬೆನ್ನಿನ ಮೇಲೆ ಪ್ರಕಾಶಿಸುವ, **ಕಕುತ್** (ಇವ)–ಹಿಣಿಲಿನಂತೆ **ಆಭಿರೂಪ್ಯಂ**–ಆಕರ್ಷಕವಾಗಿ ಸುಂದರವಾದ, **ನಿತಾಂತನಿರ್ಭಾಸಿತ**–ಪರಿಪೂರ್ಣವಾಗಿ ಪ್ರಕಾಶಿಸುವ, **ಜಾನುಯುಗ್ಮಂ**- (ಆಚಾರ್ಯರ) ಮೊಣಕಾಲುಗಳೆರಡೂ (ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ.)

ಪರಮಾತ್ಮನನ್ನು ಧ್ಯಾನಮಾಡುವಂತೆಯೇ ಆಚಾರ್ಯರನ್ನು ಧ್ಯಾನಮಾಡುವಾಗಲೂ ಪಾದದಿಂದ ಕೇಶಾಂತ ಧ್ಯಾನಮಾಡಬೇಕು, ಪರಮಾತ್ಮನ ಧ್ಯಾನದಲ್ಲಿ ಈ ಕ್ರಮವನ್ನು ವಿಶೇಷವಾಗಿ ತಿರುಪ್ಪಾಣಾಳ್ವಾರರು-'ಅಮಲನಾದಿಪಿರಾನ್' ಪ್ರಬಂಧದಲ್ಲಿಯೂ ಮತ್ತು ಶ್ರೀಮದ್ವೇದಾಂತದೇಶಿಕರ 'ಭಗವದ್ಧ್ಯಾನಸೋಪಾನದಲ್ಲಿ'ಯೂ ಕಾಣಬಹುದು-ಆದುದರಿಂದಲೇ ಕುಮಾರ ನಯನಾಚಾರ್ಯರೂ ಹಿಂದಿನ ಶ್ಲೋಕದಲ್ಲಿ ಆಚಾರ್ಯರ ಪಾದಗಳ ವರ್ಣನೆಯನ್ನು ಮಾಡಿ, ಈ ಶ್ಲೋಕದಲ್ಲಿ ಪಾದದಿಂದ ಮಂಡಿಯವರೆವಿಗೂ ವ್ಯಾಪಿಸಿರುವ ಮೊಣಕಾಲಿನ ವರ್ಣನೆಯನ್ನು ಮಾಡಿದ್ದಾರೆ.

ಮನ್ಮಥನ ಬತ್ತಳಿಕೆಯು ಸೌವರ್ಣಕಾಂತಿಯಿಂದ ಕೂಡಿದೆ ಮತ್ತು ಅನೇಕ ವಿಧವಾದ ಸಂಮ್ಮೋಹನವೇ ಮೊದಲಾದ ಅಸ್ತ್ರಗಳನ್ನೂ, ನಾನಾ ತರಹದ ಬಾಣಗಳನ್ನೂ ಹೊಂದಿದೆ. ಇವನ ಬಾಣಗಳು ಎಷ್ಟು ಪ್ರಭಾವಶಾಲಿಯಾದುದು—ಎಂದರೆ, ಅಸ್ತ್ರಪ್ರಯೋಗ ಮಾಡದಿದ್ದರೂ, ಕೇವಲ ಬತ್ತಳಿಕೆಯನ್ನು ನೋಡುವುದರಿಂದಲೇ ನೋಡುವವನ ಮನಸ್ಸನ್ನು ಸೆಳೆದು ಮೋಹಕ್ಕೆ ಒಳಗುಮಾಡುತ್ತದೆ. ಅಂತೆಯೇ ನಮ್ಮ ಆಚಾರ್ಯರ ಪಾದದಿಂದ ಮಂಡಿಯ ವರೆವಿಗೂ ವ್ಯಾಪಿಸಿ ಹಿಂದಕ್ಕೆ ಬಗ್ಗಿ ಸೌಂದರ್ಯವನ್ನು ಹೆಚ್ಚಿಸುತ್ತಾ ಸ್ವರ್ಣಕಾಂತಿಯಿಂದ ಕೂಡಿರುವ ಮೀನಖಂಡದಿಂದ ಪ್ರಕಾಶಿಸುವ ಮೊಳಕಾಲು ಗಳೆರಡೂ ಧ್ಯಾನಮಾತ್ರದಿಂದ ಧ್ಯಾನಮಾಡುವವನ ಮನಸ್ಸನ್ನು ಸೆಳೆದು ಬೇರೆಡೆ ಹೋಗದಂತೆ ತಡೆದು ನಿಲ್ಲಿಸುತ್ತದೆ. ಈರೀತಿ ಮನಮೋಹಕವಾದ ಆಚಾರ್ಯರ ಜಂಘಾ ಪ್ರದೇಶವು ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸು-ವಂತಾಗಲಿ—ಎಂದು ಪ್ರಾರ್ಥಿಸಿದ್ದಾರೆ.

ಮತ್ತೆ ಹೋರಿ ಅಥವಾ ಗೂಳಿಗೆ ಅದರ ಬಲವೆಲ್ಲವೂ ಅಡಕವಾಗಿಯೂ, ಮತ್ತು ದೇಹದಲ್ಲಿ ಪ್ರಕಾಶಮಾನವಾಗಿಯೂ ಇರುವ ಭಾಗ-ಅದರ ಬೆನ್ನಿನ ಮೇಲಿರುವ 'ಹಿಣಿಲು.' ಅಂತೆಯೇ ಆರೋಗ್ಯದೃಢಗಾತ್ರರಾದವರಿಗೆ ಜಂಘಾ ಬಲವೇ ಪ್ರಧಾನವಾದುದು. ನಮ್ಮ ಆಚಾರ್ಯರು ಬಹಳ ದೃಢಗಾತ್ರರಾಗಿದ್ದುದ-ರಿಂದ ಅವರು ಶಕ್ತಿಯುತವಾದ, ಹೋರಿಯಬೆನ್ನಿನಮೇಲಿನ ಹಿಣಿಲನ್ನು ಹೋಲು-ವಂತಿರುವ ಮಂಡಿಯ ಭಾಗದಿಂದ ಸುಶೋಭಿತವಾದ ಮೊಣಕಾಲಿನಿಂದ ಶೋಭಿಸುತ್ತಿದ್ದರು-ಈರೀತಿ ಸುಶೋಭಿತವಾದ ಪಾದದಿಂದ ಮಂಡಿಯವರೆವಿಗೂ ವ್ಯಾಪಿಸಿರುವ ಆಚಾರ್ಯರ ದಿವ್ಯಮಂಗಳ ವಿಗ್ರಹವು ನಿರಂತರವಾಗಿ ನನ್ನ ಕಣ್ಣಿನಿಂದ ಸಾಕ್ಷಾತ್ಕೃತವಾಗಲಿ-ಎಂದೂ ಪ್ರಾರ್ಥಿಸಿದ್ದಾರೆ.

**ರಂಭಾವರಸ್ತಂಭವಿಜ್ರುಂಭಮಾಣದುರ್ಗರ್ವಸರ್ವಂಕಷಸಕ್ಥಿದೃಶ್ಯಂ ।**
**ಕಟೀತಟಶ್ಲಿಷ್ಟ ಪವಿತ್ರಶುಭ್ರಾಂತರೀಯನಿರ್ಭಾಸಿನಿತಂಬಬಿಂಬಮ್ ॥೬॥**

ರಂಭಾವರಸ್ತಂಭ-ಶ್ರೇಷ್ಠವಾದ ಬಾಳೆಯ ಕಂಬದಂತೆ, ವಿಜ್ರುಂಭಮಾಣ-ಪ್ರಕಾಶಿಸಲ್ಪಟ್ಟು, ದುರ್ಗರ್ವ-ಕೆಟ್ಟ ಭಾವನೆಯಿಂದ ಗರ್ವಕ್ಕೆ

ಒಳಗಾದ, **ಸರ್ವಂಕಷ**–ಎಲ್ಲರನ್ನೂ ಅಡಗಿಹೋಗುವಂತೆ ಅಥವಾ ಲೀನವಾಗುವಂತೆ ಮಾಡುವ, **ಸಕ್ಥಿದ್ವಯಂ**–ತೊಡೆಯ ಭಾಗವೂ, **ಕಟೀತಟೆ**–ಸೊಂಟದ ಭಾಗದಲ್ಲಿ, **ಶ್ಲಿಷ್ಟ**–ಕೂಡಿಕೊಂಡಿರುವ, **ಪವಿತ್ರ**–ಪವಿತ್ರವಾದ, **ಶುಭ್ರ**–ಬಿಳುಪಾದ, **ಅಂತರೀಯ**–ಪಂಚೆಯಿಂದ, **ನಿರ್ಭಾಸಿ**–ಪ್ರಕಾಶಿಸುತ್ತಿರುವ, **ನಿತಂಬಬಿಂಬಮ್**–ನಿತಂಬಗಳಿಂದ ಕೂಡಿದ ದಿವ್ಯಮಂಗಳ ವಿಗ್ರಹವು (ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ).

ನಮ್ಮ ಆಚಾರ್ಯರ ಮಂಡಿಗಳಿಂದ ಮೇಲಿರುವ ತೊಡೆ, ಶುಭ್ರವಾದ ಉಟ್ಟಿರುವ ವಸ್ತ್ರ, ಅದರಿಂದಲಂಕೃತವಾದ ಸೊಂಟ ಮತ್ತು (ಪಿರ್ರೆಯ) ನಿತಂಬದ ಭಾಗಗಳನ್ನು ಇಲ್ಲಿ ವರ್ಣಿಸಿದ್ದಾರೆ.

ನಮ್ಮ ಆಚಾರ್ಯರ ತೊಡೆಗಳು ನೀಳವಾಗಿಯೂ ಮತ್ತು ದಪ್ಪನಾಗಿಯೂ ಬಾಳೆಯ ಕಂಬದಂತೆ ಶೋಭಿಸುತ್ತದೆ. ಸಾಮಾನ್ಯವಾದ ಜಟ್ಟಿಗಳಿಬ್ಬರು ಪರಸ್ಪರ ಕುಸ್ತಿಮಾಡಬೇಕಾದರೆ ಒಬ್ಬರನ್ನೊಬ್ಬರು ತಮ್ಮ ತೊಡೆಯನ್ನು ತಟ್ಟಿಕೊಂಡು ಕರೆಯುವುದು ವಾಡಿಕೆ. ಅವರಲ್ಲಿ ದುರ್ಬಲನಾದವನು ಪ್ರಬಲನಾದವನ ಶಕ್ತಿಗಂಜಿ ತಾನೇ ರಂಗಕ್ಕೆ ಬರದೆ ದೂರ ಸರಿಯುತ್ತಾನೆ. ಕೆಲವರು ದುರ್ಬಲರಾದರೂ ಕೆಟ್ಟಗರ್ವದಿಂದ ಮಾತ್ರ ಕೂಡಿದವರು, ರಂಗಕ್ಕೆ ಬಂದು ಎದುರಾಳಿಯ ಹೊಡೆತಕ್ಕೆ ಪಾತ್ರರಾಗಿ, ಎದುರಾಳಿಯಿಂದ ನೆಲದ ಮೇಲೆ ಉರುಳಿಸಲ್ಪಟ್ಟು, ಅವರ ಬಲವೇ ಉಡುಗಿಹೋಗಿ ಪ್ರಕಾಶಕ್ಕೆ ಬಾರದಂತಾಗುತ್ತಾರೆ. ಅಂತೆಯೇ, ನಮ್ಮ ಆಚಾರ್ಯರೂ ಸರ್ವವಾದಿ ವಿಜಯಿಗಳು. ಇವರೊಡನೆ ವಾಗ್ಯುದ್ಧಮಾಡುವ ಸಾಮರ್ಥ್ಯ ಯಾರಿಗೂ ಇರಲಿಲ್ಲ. ಒಂದು ವೇಳೆ ಗರ್ವದಿಂದ ಇವರೊಡನೆ ವಾಗ್ವಾದ ಮಾಡಿಯೇ ತಿರುತ್ತೇನೆಂದು ಯಾವನಾದರೂ ಇವರ ಮುಂದೆ ಬಂದು ನಿಂತು, ಇವರ ಪಾದಾದಿಯಾಗಿ ತೊಡೆಯನ್ನು ದರ್ಶನ ಮಾಡಿದೊಡನೆ, ಅವರ ಅಪ್ರತಿಹತವಾದ ತೇಜಸ್ಸಿನಿಂದ, ಮುಂದೆ ವಾದಮಾಡಲಾಗದೆ ಹಿಂಜರಿದು, ಅವರಲ್ಲಿ ಶರಣಾಗತಿ ಮಾಡಿ ಅವರ ಮತದಲ್ಲಿಯೇ ಲೀನವಾಗುತ್ತಿದ್ದನು.

"ವಸ್ತ್ರೇಣ ವಪುಷಾ ವಾಚಾ ವಿದ್ಯಯಾ ವಿನಯೇನ ಚ ।
ವಕಾರಪಂಚಕೈರ್ಯುಕ್ತಃ ನರಃ ಸೋ ಯಾತಿ ಗೌರವಮ್ ॥"

"ಒಳ್ಳೆಯ ವಸ್ತ್ರ, ಮೈಕಟ್ಟು, ವಾಗ್ಮಿತಾ, ವಿದ್ಯೆ ಮತ್ತು ವಿನಯ. ಎಂಬ (ಸಂಸ್ಕೃತ ಭಾಷೆಯಲ್ಲಿ) ವಕಾರದಿಂದ ಪ್ರಾರಂಭವಾಗುವ ಐದು ಗುಣಗಳಿಂದ ಕೂಡಿದ ಯಾವುದೇ ಮನುಷ್ಯನಾದರೂ ಗೌರವವನ್ನು ಹೊಂದುತ್ತಾನೆ."-ಎಂದು ಹೇಳುವಂತೆಯೇ,ಮೇಲಿನ ಐದುಗುಣಗಳನ್ನೂ ಆಚಾರ್ಯರು ಹೊಂದಿದ್ದರು. ಅವರ ದೇಹಸೌಷ್ಠವಕ್ಕೂ, ವಾಗ್ಮಿತೆಗೂ ಅನುಗುಣವಾಗಿ ಪವಿತ್ರವಾಗಿಯೂ ಮತ್ತು ಶುಭ್ರವಾಗಿಯೂ ಇರುವ ಪಂಚೆಯನ್ನು ಸೊಂಟದಲ್ಲಿ ಧರಿಸಿದ್ದರು. ಇದು ಇವರ ನಿತಂಬಭಾಗವನ್ನು ಪೂರ್ಣವಾಗಿ ಆವರಿಸಿ ಶೋಭಿಸುತ್ತಿದ್ದಿತು. ಈ ರೀತಿಯಿದ್ದ ಇವರ ವಸ್ತ್ರದಿಂದ ಅಲಂಕೃತವಾದ ತೊಡೆ, ಸೊಂಟ ಮತ್ತು ನಿತಂಬಭಾಗವು ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ-ಎಂದು ಪ್ರಾರ್ಥಿಸಿದ್ದಾರೆ.

ಆವರ್ತಗರ್ತೋಜ್ಜ್ವಲನಾಭಿಚಕ್ರಂ-
ಅತ್ಯಾಯತೋರಸ್ಸ್ಥಲ ದೀಪ್ಯಮಾನಂ ।
ಆಜಾನುಲಂಬ್ಯಾಯತವೃತ್ತ ಬಾಹುಂ-
ಅತ್ಯುನ್ನತಾಂಸಂ ಶ್ರಿತಗೂಢಜತ್ರುಂ ॥೭॥

**ಆವರ್ತಗರ್ತ** — ಸುಳಿಯಂತೆ ಆಳವಾದ, **ಉಜ್ವಲ** — ಪ್ರಕಾಶಿಸುತ್ತಿರುವ, **ನಾಭಿಚಕ್ರಂ** — ಹೊಕ್ಕಳುಳ್ಳ, **ಅತ್ಯಾಯತ**— ಬಹಳ ವಿಶಾಲವಾದ, **ಉರಸ್ಸ್ಥಲ** — ಎದೆಯಭಾಗದಿಂದ, **ದೀಪ್ಯಮಾನಂ** — ಶೋಭಿಸುತ್ತಿರುವ, **ಆಜಾನುಲಂಬೀ**—ಮೊಣಕಾಲಿನವರೆಗೂ ವ್ಯಾಪಿಸುವ (ಇಳಿಬಿಟ್ಟಿರುವ), **ಆಯತ** — ನೀಳವಾದ, **ವೃತ್ತ**— ದುಂಡಗಿರುವ, **ಬಾಹು** — ತೋಳಿನಿಂದ ಕೂಡಿದ, **ಶ್ರಿತಗೂಢಜತ್ರುಂ**— ತನ್ನನ್ನು ಆಶ್ರಯಿಸಿದವರನ್ನು ರಹಸ್ಯವಾಗಿ ರಕ್ಷಿಸುವ (ಗುಣವನ್ನು ಸೂಚಿಸುವ) **ಅತ್ಯುನ್ನತಾಂಸಂ**—ಬಹಳ ಎತ್ತರ

ವಾದ ತೋಳಿನ ಮೇಲ್ಭಾಗದಿಂದ ಕಂಗೊಳಿಸುವ (ನಮ್ಮ ಆಚಾರ್ಯರ ದಿವ್ಯ ಮಂಗಳ ಮೂರ್ತಿಯು ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ)

ಈ ಪದ್ಯದಲ್ಲಿ ನಮ್ಮ ಆಚಾರ್ಯರ ದಿವ್ಯಮಂಗಳ ವಿಗ್ರಹದಲ್ಲಿ, ನಾಭಿಯಿಂದ ತೋಳಿನ ಪರ್ಯಂತ ವ್ಯಾಪಿಸಿರುವ ಅಂಗಾಂಗಗಳ ಸೌಷ್ಠವವು ವರ್ಣಿಸಲ್ಪಟ್ಟಿದೆ. ಸುಲಕ್ಷಣನಾದ ಮನುಷ್ಯನ ದೇಹದಂತೆಯೇ ನಮ್ಮ ಆಚಾರ್ಯರ ದೇಹದಲ್ಲಿಯೂ ಹೊಕ್ಕಳು ಬಹಳ ಆಳವಾದ ಸುಳಿಯಂತೆ ಕಾಣುತ್ತಿದೆ. ಎದೆಯು ವಿಶಾಲವಾಗಿದೆ. ಲೋಕದಲ್ಲಿ ವಿಶೇಷವಾಗಿ ಸತ್ಕೀರ್ತಿಗೆ ಪಾತ್ರನಾಗಿ ಬಾಳುವ ವ್ಯಕ್ತಿಗಳಿಗೆ ಮಾತ್ರವೇ ತೋಳುಗಳು ನೇರವಾಗಿ ನಿಂತಾಗ ಮಂಡಿಯವರೆವಿಗೂ ವ್ಯಾಪಿಸಿರುತ್ತವೆ. ಅಂತೆಯೇ ಎಲ್ಲ ಲೋಕಗಳಲ್ಲಿಯೂ ಕೀರ್ತಿವಂತರಾದ ನಮ್ಮ ಆಚಾರ್ಯರ ತೋಳುಗಳೂ ನೀಳವಾಗಿಯೂ, ದುಂಡಾಗಿಯೂ ಇದ್ದು ಮೊಣಕಾಲಿನವರೆವಿಗೂ ವ್ಯಾಪಿಸಿದ್ದುವು. ಲೋಕದಲ್ಲಿ ಪ್ರಜೆಗಳ ಸಂರಕ್ಷಣವೇ ಪ್ರಧಾನವಾಗಿ, ತನ್ನಲ್ಲಿ ಮರೆಹೊಕ್ಕ ವ್ಯಕ್ತಿಯನ್ನು ಇತರರಿಂದುಂಟಾಗುವ ದುಃಖದಿಂದ ಪಾರುಮಾಡಿ ರಕ್ಷಿಸುವ ತೋಳ್ಬಲದಿಂದ ಕೂಡಿದ ಪರಾಕ್ರಮಿಯಾದ ಮಹಾರಾಜನ ತೋಳಿನ ಮೇಲ್ಭಾಗವಾದರೋ ಎತ್ತರವಾಗಿರುತ್ತದೆ. ಅಂತೆಯೇ, ಈ ಲೋಕದಲ್ಲಿ ತನ್ನನ್ನು ತಾನು ರಕ್ಷಿಸಿಕೊಳ್ಳಲಸಮರ್ಥರಾಗಿ, ಭಕ್ತಿಯೋಗವನ್ನನುಷ್ಠಿಸಲೂ ಅಶಕ್ತರಾಗಿ, ಕರ್ಮಬಂಧದಿಂದುಟಾಗುವ ಜನ್ಮ ಮರಣ ಚಕ್ರಕ್ಕೆ ಅಂಜಿ, ಆಚಾರ್ಯರಲ್ಲಿ ಶರಣಾಗತಿ ಮಾಡುವ ಚೇತನರೆಲ್ಲರನ್ನೂ, ಅವರ ಕರ್ಮಬಂಧದಿಂದುಂಟಾಗುವ ದುಃಖದಿಂದ ಪಾರುಮಾಡಿ ಶರಣಾಗತಿಯ ಮಾರ್ಗದಲ್ಲಿ ರಕ್ಷಿಸುವ ಸಾಮರ್ಥ್ಯವುಳ್ಳ, ಚೇತನೋದ್ಧಾರ ಕಾರ್ಯದಲ್ಲಿ ತೊಡಗಿರುವ ಆಚಾರ್ಯರುಗಳಲ್ಲಿ ಮಹಾರಾಜರಂತೆ ವಿರಾಜಿಸುತ್ತಿರುವ ನಮ್ಮ ಆಚಾರ್ಯರ 'ಅಂಸ' ಅಥವಾ ತೋಳಿನ ಮೇಲ್ಭಾಗವೂ ಎತ್ತರವಾಗಿ ಶೋಭಿಸುತ್ತಿದ್ದಿತು. ಈ ರೀತಿ ಇರುವ ನಮ್ಮ ಆಚಾರ್ಯರ ದಿವ್ಯಮಂಗಳ ವಿಗ್ರಹವು ನನ್ನಿಂದ ಸಾಕ್ಷಾತ್ಕರಿಸುವಂತಾಗಲಿ–ಎಂದು ಇಲ್ಲಿ ಪ್ರಾರ್ಥಿಸಿದ್ದಾರೆ.

ಶಂಖಪ್ರತಿಸ್ಪರ್ಧಿಸುಜಾತಕಂಠ ಶಾಂತೋಪಮಾನಾಯುತಕರ್ಣಪಾಶಂ |
ಸುಸ್ನಿಗ್ಧಬದ್ಧಸ್ಮಿತ ಚೂತಪೋತ ನವ್ಯಪ್ರವಾಳೋಪಮಿತಾಧರೋಷ್ಠಂ ||

ಶಂಖಪ್ರತಿಸ್ಪರ್ಧಿಸುಜಾತಕಂಠಂ - ಶಂಖದನಾದದೊಡನೆ ಎದುರಾಗಿ ಸ್ಪರ್ಧಿಸಲೆಂದೇ ಹುಟ್ಟಿರುವ ಕಂಠದಿಂದ ಕೂಡಿದ,ಶಾಂತೋಪಮಾನಾಯುತ-ಕರ್ಣಪಾಶಂ-ಶಾಂತ ಗುಣದಂತೆ ಚಿಕ್ಕದಾದ ಕಿವಿಯ ಆಲೆಗಳುಳ್ಳ, ಸುಸ್ನಿಗ್ಧ-ಬದ್ಧಸ್ಮಿತ-ವಿಶೇಷವಾದ ಸ್ನೇಹದಿಂದ ಕೂಡಿದ ಮುಗುಳ್ನಗೆಯಿಂದ, ಚೂತ-ಪೋತ-ಮಾವಿನಗಿಡದ, ನವ್ಯಪ್ರವಾಳ-ಹೊಸದಾಗಿ ಚಿಗುರುವ ಚಿಗುರನ್ನು ಉಪಮಿತ ಹೋಲುವ, ಅಧರೋಷ್ಠಂ-ಕೆಳತುಟಿಯಿಂದ ಕೂಡಿದ (ದಿವ್ಯ ಮಂಗಳ ವಿಗ್ರಹವು ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ).

ಒಳ್ಳೆಯ ಬಲಮುರಿ ಶಂಖದ ನಾದವು ಗಂಭೀರವಾಗಿಯೂ ಮತ್ತು ಕಿವಿಗಿಂಪಾಗಿಯೂ ಇರುತ್ತದೆ. ಶಂಖದ ನಾದದಲ್ಲಿ ಪ್ರಣವನಾದವೂ ಕೇಳಿ ಬರುತ್ತದೆ. ಕಿವಿಗಿಂಪಾದ ನಮ್ಮ ಆಚಾರ್ಯರ ಕಂಠವು ಶಂಖನಾದಕ್ಕಿಂತಲೂ ಮಿಗಿಲಾಗಿ, ಗಂಭೀರವಾದ ಧ್ವನಿಯಿಂದ ಕೂಡಿದ್ದಿತು. ಆಚಾರ್ಯರು ಪರ-ಮಾತ್ಮನನ್ನೂ ಉದ್ಗೀಥೋಪಾಸನೆಯಿಂದ ಉಪಾಸಿಸುತ್ತಿದ್ದುದರಿಂದ, ಅವರ ಕಂಠಧ್ವನಿಯೂ ಪ್ರಣವೋಚ್ಚಾರಣೆಯಲ್ಲಿ ಅಧಿಕವಾಗಿ ನಿರತವಾಗಿದ್ದಿತು. ಈ ಎಲ್ಲ ಕಾರಣದಿಂದ ನಮ್ಮ ಆಚಾರ್ಯರ ಕಂಠವು, ಶಂಖದೊಡನೆ ಪ್ರತಿಯಾಗಿ ಸ್ಪರ್ಧಿಸಲೆಂದೇ ಹುಟ್ಟಿದೆಯೆಂದು ಬಣ್ಣಿಸಿದ್ದಾರೆ.

ಪರಾಕ್ರಮವೇ ಮೊದಲಾದ ಗುಣಗಳಂತೆ, ಶಾಂತಗುಣವು ವಿಶೇಷವಾಗಿ ಪ್ರಕಾಶಕ್ಕೆ ಬಾರದಿದ್ದರೂ, ಯಾವ ವ್ಯಕ್ತಿಗೂ ತೊಂದರೆಯನ್ನುಂಟುಮಾಡದೆ ಬಹಳ ಪ್ರಭಾವಯುತವಾಗಿರುತ್ತವೆ. ಅಂತೆಯೇ ಆಚಾರ್ಯರ ದೇಹ ಪ್ರಮಾ-ಣವೂ,'ಆಕಾಲೋ ಹ್ರಸ್ವಃ'-ಎಂದು ಹೇಳುವಂತೆ, ಬಹಳ ಚಿಕ್ಕದಾಗಿದ್ದಿತು. ಆದರೆ, 'ಆಕಾರ ಚಿಕ್ಕದಾದರೂ ಕೀರ್ತಿ ದೊಡ್ಡದು'— ಎಂದು ಹೇಳುವಂತೆ, ಅವರ ವಿದ್ಯೆ, ವಿನಯ, ನಡತೆ, ಶಾಂತಿಯೇ ಮೊದಲಾದ ಗುಣಗಳಿಂದ ಬಹಳ

ಪ್ರಭಾವಯುತರಾಗಿದ್ದರು. ಅವರ ದೇಹಪ್ರಮಾಣಕ್ಕೆ ಅನುಗುಣವಾಗಿ ಅವರ ಕಿವಿಯ ಆಲೆಗಳು ಚಿಕ್ಕದಾಗಿದ್ದಿತು.

ಮಾವಿನ ಗಿಡದಲ್ಲಿ ಮೊಟ್ಟಮೊದಲು ಚಿಗುರುವ ಚಿಗುರುಗಳು, ಕೆಂಪು ಬಣ್ಣದಿಂದ ಸ್ವಲ್ಪಮಟ್ಟಿಗೆ ಅರಳಿ ಶೋಭಿಸುತ್ತಿರುತ್ತವೆ. ಅಂತೆಯೇ, ನಮ್ಮ ಆಚಾರ್ಯರೂ, ಯಾವಾಗಲೂ ಶಾಂತಚಿತ್ತರಾಗಿದ್ದುದರಿಂದ ಹಸನ್ಮುಖರಾಗಿ ಮುಗುಳ್ನಗೆಯಿಂದ ಕೂಡಿದವರಾಗಿದ್ದುದರಿಂದ ಅವರ ಕೆಂಪೇರಿರುವ ತುಟಿಗಳು ಸ್ವಲ್ಪಮಟ್ಟಿಗೆ ಮಾತ್ರ ತೆರೆದುದಾಗಿ ಬಹಳ ಆಕರ್ಷಕವಾಗಿ ಶೋಭಿಸುತ್ತಿದ್ದಿತು. ಈ ರೀತಿ ಇರುವ ಅವರ ದಿವ್ಯಮಂಗಳ ವಿಗ್ರಹವು ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ-ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿದ್ದಾರೆ.

**ಸುನಿರ್ಮಲೋದಂಚಿತ ಮೌಕ್ತಿಕಾಳೀಜಡೀಕೃತಿಪೌಢಿಮದಂತಪಂಕ್ತಿಂ।**
**ವಿಕಾಸಿನಾಸಾಪುಟಕಾಂತಿಶಾಂತಪ್ರಫುಲ್ಲತಿಲ್ಯಪ್ರಸವಾವಲೇಪಂ ॥೬॥**

ಸುನಿರ್ಮಲ- ಸುಂದರವಾಗಿ ಯಾವ ಮಾಲಿನ್ಯವೂ ಇಲ್ಲದೆ, **ಉದಂಚಿತ** -ಪ್ರಕಾಶಿಸುವ, ಮೌಕ್ತಿಕಾಳೀ-ಮುತ್ತಿನ ಸಾಲಿನಂತೆ, ಜಡೀಕೃತಿ-ಕೂಡಿಕೊಂಡಿರುವ, ಪೌಢಿಮ-ಕಾಂತಿಯುಕ್ತವಾದ, ದಂತಪಂಕ್ತಿಂ-ಹಲ್ಲಿನ ಸಾಲಿನಿಂದ ಕೂಡಿರುವ, ಪ್ರಫುಲ—ಅರಳಿರುವ, ತಿಲ್ಯಪ್ರಸವ—ಎಳ್ಳಿನಹೂವನ್ನೂ ಅವಲೇಪಂ-ತಿರಸ್ಕರಿಸುವ, ವಿಕಾಸಿ-ಅರಳಿರುವ, **ನಾಸಾಪುಟ**-ಮೂಗಿನ ಹೊಳ್ಳೆಗಳ,ಕಾಂತಿಶಾತಂ-ಪ್ರಕಾಶದಿಂದ ಕೂಡಿ ಶಾಂತವಾಗಿರುವ(ಆಚಾರ್ಯರ ದಿವ್ಯಮಂಗಳ ವಿಗ್ರಹವು ನನ್ನಿಂದ ಸಾಕ್ಷಾತ್ಕರಿಸುವಂತಾಗಲಿ).

ಹಿಂದಿನ ಶ್ಲೋಕದಲ್ಲಿ ಆಚಾರ್ಯರ ಮುಗುಳ್ನಗೆಯನ್ನು ವರ್ಣಿಸಿ, ಆ ನಗೆಯ ಸನ್ನಿವೇಶದಲ್ಲಿ ಸ್ವಲ್ಪಮಟ್ಟಿಗೆ ಮಾತ್ರ ಬಾಹ್ಯದಲ್ಲಿ ಪ್ರಕಾಶಿಸುವ ದಂತಪಂಕ್ತಿಯನ್ನೂ ಮತ್ತು ಮೂಗಿನ ಸೌಂದರ್ಯವನ್ನೂ ಈ ಶ್ಲೋಕದಲ್ಲಿ ಬಣ್ಣಿಸಿದ್ದಾರೆ.

ಪರಿಶುದ್ಧವಾದ ಮತ್ತು ಸುಂದರವಾದ ಆಚಾರ್ಯರ ಹಲ್ಲುಗಳಾದರೋ, ಜೋಡಿಸಲ್ಪಟ್ಟ ಮುತ್ತಿನಸಾಲಿನಂತಿದ್ದು ಅತಿಯಾದ ಕಾಂತಿಯಿಂದ ಶೋಭಿಸುತ್ತಿದ್ದಿತು. ಆಚಾರ್ಯರ ಮೂಗಿನ ಹೊಳ್ಳೆಗಳು ಅವರ ಮುಖದ ಪ್ರಮಾಣಕ್ಕನುಗುಣವಾಗಿ ಅಗಲವಾಗಿ ಕಾಂತಿಯುಕ್ತವಾಗಿದ್ದುದರಿಂದ, ಲೋಕದಲ್ಲಿ ಪ್ರಸಿದ್ಧವಾಗಿರುವ, ಅಧೋಮುಖವಾಗಿ ಅರಳಿರುವ, ಕಾಂತಿಯುತವಾದ ಎಳ್ಳಿನ ಹೂವನ್ನೂ ತಿರಸ್ಕರಿಸುವ ಕಾಂತಿಯಿಂದ ಶೋಭಿಸುತ್ತಿದ್ದಿತು. ಆ ರೀತಿ ಇರುವ ನಮ್ಮ ಆಚಾರ್ಯರ ದಿವ್ಯಮಂಗಳ ವಿಗ್ರಹವು ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ–ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿದ್ದಾರೆ.

**ನಾಸಾಲಸತ್ಕಲ್ಪಲತಾಪ್ರಸೂನಯುಗಾಯಿತಾಂಭೋರುಹಚಾರುನೇತ್ರಂ।**
**ತತ್ಸೌರಭಾಘ್ರಾಣವಿನಿಶ್ಚಲಾಳಿದ್ವಯೋಪಮಭ್ರೂಯುಗಳಾಭಿರಾಮಂ ॥**

**ನಾಸಾಲಸತ್**–ಪ್ರಕಾಶಿಸುವ ಮೂಗೆಂಬ, ಕಲ್ಪಲತಾಪ್ರಸೂನಯುಗಾ**ಯಿತಾ**–ಕಲ್ಪಲತೆಯ ಹೂಜೋಡಿಯಂತೆ, ಅಂಭೋರುಹ–ತೀರ್ಥದಲ್ಲಿ ಉದಯಿಸಿರುವ ಕಮಲದಂತೆ ಇರುವ, **ಚಾರುನೇತ್ರಂ**–ಸುಂದರವಾದ ಕಣ್ಣುಗಳುಳ್ಳ, **ತತ್ಸೌರಭ**–ಆ ಕಣ್ಣುಗಳೆಂಬ ಪುಷ್ಪದ ಪರಿಮಳವನ್ನು, **ಆಘ್ರಾಣ**–ಮೂಸಿನೋಡಲೆಂದು,ವಿನಿಶ್ಚಲ–ಚಾಂಚಲ್ಯವಿಲ್ಲದೆ ಸ್ಥಿರವಾಗಿರುವ, ಆಳಿದ್ವಯ–ದುಂಬಿಗಳೆರಡನ್ನು, **ಉಪಮ**–ಹೋಲುವ, **ಭ್ರೂಯುಗಳ**–ಹುಬ್ಬುಗಳೆರಡರಿಂದ, **ಅಭಿರಾಮಂ**– ಸುಂದರವಾಗಿರುವ ಆಚಾರ್ಯರ ದಿವ್ಯಮಂಗಳ ವಿಗ್ರಹವು ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ

ಈ ಶ್ಲೋಕದಲ್ಲಿ ಆಚಾರ್ಯರ ಕಣ್ಣುಗಳ ಮತ್ತು ಹುಬ್ಬುಗಳ ಸೌಂದರ್ಯ ಹಾಗೂ ಮಹಿಮೆಯನ್ನು ಸುಂದರವಾಗಿ ವರ್ಣಿಸಿದ್ದಾರೆ.

ಲೋಕದಲ್ಲಿ ಪ್ರಸಿದ್ಧವಾದ ಕಲ್ಪವೃಕ್ಷವು ತನ್ನ ಸುಂದರವಾದ ಹೂವುಗಳ ಮುಖಾಂತರ ಎಲ್ಲರ ಮನಸೆಳೆದು, ತನ್ನನ್ನು ಆಶ್ರಯಿಸುವಂತೆ ಮಾಡಿಕೊಂಡು, ಅವರ ಇಷ್ಟಾರ್ಥಗಳೆಲ್ಲವನ್ನೂ ಕರುಣಿಸುವಂತೆ, ನಮ್ಮ ಆಚಾರ್ಯರ

ದಿವ್ಯ ಮುಖದಲ್ಲಿ ಉದಯಿಸಿರುವ ಮೂಗಿನ ಅಕ್ಕಪಕ್ಕದಲ್ಲಿ ಸುಂದರವಾಗಿದ್ದು ಕಲ್ಪಲತೆಯ ಹೂಜೋಡಿಗಳಂತೆ ಆಕರ್ಷಕವಾದ ಕಣ್ಣುಗಳೆರಡೂ, ತನ್ನ ಕೃಪಾಪೂರಿತವಾದ ದೃಷ್ಟಿಯಿಂದ ಎಲ್ಲರ ಕಣ್ಮನಗಳನ್ನೂ ಸೆಳೆದು ತಮ್ಮನ್ನು ಆಶ್ರಯಿಸುವಂತೆ ಮಾಡುತ್ತವೆ. ಹೀಗೆ ಆಚಾರ್ಯರನ್ನು ಆಶ್ರಯಿಸಿದವರಿಗೆ ಐಹಿಕ ಆಮುಷ್ಮಿಕವಾಗಿ ಯಾವ ಕೊರತೆಯೂ ಇಲ್ಲದಂತೆ, ಎಲ್ಲ ಇಷ್ಟಾರ್ಥಗಳೂ ಪೂರೈಸುತ್ತವೆ. ಆದುಪರಿಂದಲೇ ಆಚಾರ್ಯರ ಕಣ್ಣುಗಳನ್ನು ಕಲ್ಪಲತೆಯ ಹೂಜೋಡಿಗೆ ಹೋಲಿಸಿದ್ದಾರೆ.

ಲೋಕದಲ್ಲಿ ಆಳವಾದ ತೀರ್ಥದಲ್ಲಿ ಬೇರೂರಿ ಉದಯಿಸಿದ ಸೂರ್ಯನ ಕಿರಣಗಳಿಂದ ಅರಳಿರುವ ಕಮಲವಾದರೋ, ಶೈತ್ಯ, ಸೌಂದರ್ಯ, ಪರಿಮಳ, ಮಾಧುರ್ಯ ಗುಣಗಳಿಂದ ಕೂಡಿ, ಮಧುವಿನಿಂದ ತುಂಬಿ ಎಲ್ಲರ ಕಣ್ಮನಗಳನ್ನೂ ತಣಿಸುತ್ತವೆ. ಅಂತೆಯೇ ಭಗವಂತನ ಅಪರಿಮಿತವಾದ ಆಳವಾದ ಕರುಣಾಸ್ರೋತಸ್ಸಿನಲ್ಲಿಯೇ ಬೇರೂರಿನಿಂತು, ಭಗವಂತನ ಚೇತನೋದ್ಧಾರ ಮಾಡಬೇಕೆಂಬ, ಸಂಕಲ್ಪಸೂರ್ಯೋದಯದಿಂದ ವಿಕಸಿತವಾಗಿರುವ ಆಚಾರ್ಯರ ಸುಂದರವಾದ ಕಣ್ಣುಗಳೆರಡೂ, ಕೃಪಾಪೂರಿತವಾದ ದೃಷ್ಟಿಯಿಂದ ಶೈತ್ಯ ಗುಣದಿಂದಲೂ, ಬ್ರಹ್ಮತೇಜಸ್ಸಿನಿಂದ ಸೌಂದರ್ಯದಿಂದಲೂ, ಎಲ್ಲರ ಕಣ್ಮನಗಳನ್ನೂ ಆಕರ್ಷಿಸುವ ಗುಣಗಳಿಂದ ಪರಿಮಳ ಮಾಧುರ್ಯ ಗುಣಗಳಿಂದಲೂ, ಅವುಗಳನ್ನು ದರ್ಶನ ಮಾಡುತ್ತಿರುವವರಿಗೆ ಸರ್ವವಿಧತಾಪಗಳನ್ನೂ ಹೋಗಲಾಡಿಸಿ ಸಂತೋಷವನ್ನುಂಟುಮಾಡುವ ಗುಣದಿಂದ ಮಧುವಿನಿಂದ ಕೂಡಿದ ಪುಷ್ಪದಂತೆಯೂ ಎಲ್ಲರ ಕಣ್ಮನಗಳನ್ನೂ ತಣಿಸುವಂತಿವೆ.

ಈ ರೀತಿಯಾದ ಸುಂದರವಾದ ಕಣ್ಣುಗಳು ಆಚಾರ್ಯರಿಗುಂಟಾಗಲು, ಅವರು ನಿತ್ಯವೂ, **'ಕಪ್ಯಾಸಂ ಪುಂಡರೀಕಮೇವಂ ಅಕ್ಷಿಣೀ'** —ಎಂದು ಉಪನಿಷತ್ಪ್ರತಿಪಾದ್ಯವಾಗಿ, ಭಗವದ್ರಾಮಾನುಜರಿಂದ **'ಗಂಭೀರಾಂಭಸ್ಸಮುದ್ಭೂತರವಿಕರಕಿರಣವಿಕಸಿತಪುಂಡರೀಕದಾಲಾಯತವಿಮಲೇಕ್ಷಣಃ'** —ಎಂದು ವಿವರಿಸಲ್ಪಟ್ಟ ಪರಮಾತ್ಮನ ಕಣ್ಣುಗಳಿಂದ ಶೋಭಿತವಾದ ದಿವ್ಯಮಂಗಳ ಮೂರ್ತಿಯ ಉಪಾಸನೆಯೇ ಕಾರಣವಾಗಿದ್ದಿತು.

ಸುಂದರವಾದ ಕಮಲ ಪುಷ್ಪದಲ್ಲಿರುವ ಪರಿಮಳವನ್ನು ಮೂಸಿ, ಅದರಲ್ಲಿರುವ ಮಧುವನ್ನು ಪಾನಮಾಡಬೇಕೆಂದು ಬಂದ ದುಂಬಿಗಳು ಅದರಲ್ಲಿನ ವಿಶೇಷವಾದ ವಾಸನೆಯಿಂದ ಅಪಹೃತವಾದ ಮನಸ್ಸಿನಿಂದ ಅದನ್ನು ಆಘ್ರಾಣಿಸುತ್ತಾ, ಮಧುಪಾನ ಮಾಡುವುದನ್ನೂ ಮರೆತು, ಅದರ ಹತ್ತಿರದಲ್ಲೇ ಸ್ಥಿರವಾಗಿ ಸಾಲಾಗಿ ಕುಳಿತುಕೊಳ್ಳುತ್ತವೆ. ಅಂತೆಯೇ, ನಮ್ಮ ಆಚಾರ್ಯರ ಕಮಲದಂತಹ ಕಣ್ಣುಗಳ ಮೇಲೆ ಶೋಭಿತವಾಗಿರುವ ಕಪ್ಪುಬಣ್ಣದಿಂದ ಕೂಡಿದ ಹುಬ್ಬುಗಳೆರಡೂ ದುಂಬಿಗಳಂತೆ ಶೋಭಿಸುತ್ತಿದ್ದವು. [ಈ ಶ್ಲೋಕದಲ್ಲಿ 'ಅಳಿದ್ವಯ'–ಎರಡು ದುಂಬಿಗಳು ಎಂದಿರುವುದನ್ನು, ಎರಡು ದುಂಬಿಗಳ ಸಾಲೆಂದು ಅರ್ಥಮಾಡಿದರೆ, ನೀಳವಾದ ಹುಬ್ಬುಗಳೆರಡರ ವರ್ಣನೆಗೆ ಸಮಂಜಸವಾಗುತ್ತದೆ]. ಈ ರೀತಿ ಶೋಭಿಸುತ್ತಿರುವ ಆಚಾರ್ಯರ ದಿವ್ಯ ಮಂಗಳ ಮೂರ್ತಿಯು ಕಣ್ಣುಗಳೂ ಮತ್ತು ಹುಬ್ಬುಗಳೂ ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ–ಎಂದು ಪ್ರಾರ್ಥಿಸಿದ್ದಾರೆ.

**ನಿಜಾರ್ಧಚಂದ್ರೋಪವೀತಾಳಿಕೋದ್ಯ-**
**ನ್ನಿರಂತರೋದ್ಭಾಸಿಸಿತೋರ್ಧ್ವಪುಂಡ್ರಂ ।**
**ಸಿತಾಯತಸ್ವಚ್ಛಶಿರೋಜಬಂಧಂ**
**ಮುನ್ನೇಶ್ಶಠಾರೇರಿನ ಮೂರ್ತಿಭೇದಂ ॥ ೧೧ ॥**

**ಅರ್ಧಚಂದ್ರ** + **ಉಪವೀತ**–ಅರ್ಧಚಂದ್ರನನ್ನು ಹೋಲುವ, **ನಿಜ**–ತನ್ನ **ಅಳಿಕ**–ಹಣೆಯಿಂದ, **ಉದ್ಯತ್**–ಹೊರಹೊಮ್ಮಿದ, **ನಿರಂತರ**–ಎಡೆಬಿಡದೆ, **ಉದ್ಭಾಸಿ**–ಪ್ರಕಾಶಿಸುತ್ತಿರುವ, **ಊರ್ಧ್ವಪುಂಡ್ರಂ**–ಊರ್ಧ್ವಪುಂಡ್ರ ಅಥವಾ ನಾಮದಿಂದ ಶೋಭಿಸುವ, **ಶಠಾರೇಃಮುನೇಃ** — ನಮ್ಮಾಳ್ವಾರ್‌ರವರ, **ಮೂರ್ತಿಭೇದಂ**–ಬೇರೊಂದು ರೂಪವಾದ(ಪರಮಾತ್ಮನ ಪಾದ ಚಿಹ್ನಿತವಾದ) ಶಠಾರಿಯಂತೆ, **ಸಿತ**–ಬಿಳುಪಾದ, **ಆಯತ**—ನೀಳವಾದ, **ಸ್ವಚ್ಛ**-ಪರಿಶುದ್ಧವಾದ, **ಶಿರೋಜಬಂಧಂ**—ಕಟ್ಟಲ್ಪಟ್ಟ ಶಿಖೆಯಿಂದ ಕೂಡಿದ, (ನಮ್ಮ ಆಚಾರ್ಯರ ದಿವ್ಯಮಂಗಳ ಮೂರ್ತಿಯು ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ).

ಈ ಶ್ಲೋಕದಲ್ಲಿ ಆಚಾರ್ಯರ ಊರ್ಧ್ವಪುಂಡ್ರದಿಂದ ಶೋಭಿಸುವ ಲಾಲಟ ಪ್ರದೇಶವನ್ನೂ, ಶಿಖೆಯಿಂದ ಅಲಂಕೃತವಾದ ಶಿರಸ್ಸನ್ನೂ ವರ್ಣಿಸಿ-ದ್ದಾರೆ.

ನಮ್ಮ ಆಚಾರ್ಯರು ಹಣೆಯಲ್ಲಿ, ಬಿಳುಪಾಗಿಯೂ, ಪರಿಶುದ್ಧವಾ-ಗಿಯೂ ಇರುವ 'ವಡಗಲೆ' ತಿರುಮಣ್ಣನ್ನು ಹುಬ್ಬುಗಳ ಮಧ್ಯಭಾಗದಲ್ಲಿರುವ, ಮೂಗಿನ ಅಂತ್ಯಭಾಗದಿಂದ ತಲೆಯವರಿವಿಗೂ ವ್ಯಾಪಿಸಿರುವಂತೆ ಧರಿಸಿದ್ದಾರೆ. ಅರ್ಧಚಂದ್ರನ ಬಿಂಬವು ಹೇಗೆ ಮೇಲ್ಮುಖವಾಗಿ ಪ್ರಕಾಶವನ್ನು ಸೂಸುತ್ತಾ ನಿರಂತರವಾಗಿ ಶೋಭಿಸುತ್ತದೆಯೋ, ಹಾಗೆಯೇ ನಮ್ಮ ಆಚಾರ್ಯರ ತಿರುಮಣ್ ಅಥವಾ ನಾಮವೂ ಬಿಳುಪಾಗಿಯೂ, ಪರಿಶುದ್ಧವಾಗಿಯೂ ಕಾಂತಿ ಯುತವಾಗಿ 'ಉರ್ಧ್ವಪುಂಡ್ರ'ವಾಗಿ ಶೋಭಿಸುತ್ತಿದೆ.

'ಪರಮಾತ್ಮನ ಲಲಾಟದಲ್ಲಿರುವ ಊರ್ಧ್ವಪುಂಡ್ರವು,ಅವನನ್ನಾಶ್ರಯಿಸಿ-ದವರೆಲ್ಲರನ್ನೂ ಊರ್ಧ್ವಮುಖವಾಗಿ ಒಯ್ದು ನಿತ್ಯವಿಭೂತಿ ಅಥವಾ ವೈಕುಂಠ ವನ್ನು ಸೇರುವಂತೆ ಮಾಡುವುದನ್ನು ಸೂಚಿಸುತ್ತದೆ,—ಎಂಬ ಆಶಯವನ್ನು, ಶ್ರೀವತ್ಸಾಂಕಮಿಶ್ರರು ವರದರಾಜಸ್ತವರದಲ್ಲಿ ಈ ಕೆಳಕಂಡ ಶ್ಲೋಕದಲ್ಲಿ

"ಉದ್ಧರತ್ಯುಪರಿ ಭಕ್ತಜನಾನೀತ್ಯೂರ್ಧ್ವತಾಶ್ರಯಣಸೂಚಿತ ಶಕ್ತಿರ್ |
ಊರ್ಧ್ವಪುಂಡ್ರತಿಲಕಂ ಬಹುಮಾನಾಕ್ಕಿಂಬಿಭರ್ಷಿ ವರದಸ್ವಲಲಾಟೇ ||

—ಎಂದು ವರ್ಣಿಸಿದ್ದಾರೆ. ಅಂತೆಯೇ ನಮ್ಮ ಆಚಾರ್ಯರ ಲಲಾಟದಲ್ಲಿನ ಊರ್ಧ್ವಪುಂಡ್ರವೂ, ಅವರನ್ನು ಆಶ್ರಯಿಸಿದವರೆಲ್ಲರನ್ನೂ ಊರ್ಧ್ವಮುಖ-ವಾಗಿ ನಿತ್ಯವಿಭೂತಿಗೆ ಅವರು ಒಯ್ಯುತ್ತಾರೆ ಎಂಬುದನ್ನು ಸೂಚಿಸುತ್ತದೆ.

ಅರ್ಧಚಂದ್ರನಾದರೋ ಊರ್ಧ್ವಮುಖವಾಗಿ, ತನ್ನ ಕಿರಣಗಳನ್ನು ಪ್ರಸರಿಸುತ್ತಾ, ತನ್ನನ್ನು ದರ್ಶನ ಮಾಡಿದವರೆಲ್ಲರಿಗೂ, ಪಾಪವನ್ನು ಹೋಗ-ಲಾಡಿಸಿ ಆಹ್ಲಾದಕತೆಯನ್ನುಂಟುಮಾಡಿದರೂ, ವಿರಹಿಗಳಾದ ಪ್ರಿಯಪ್ರೇಯಸಿ ಯರಿಗೆ ಮಾತ್ರ ಪರಸ್ಪರ ಎಂದು ತಾವು ಒಬ್ಬರನ್ನೊಬ್ಬರು ಕೂಡುವಂತಾಗು-

ತ್ತದೋ, ಎಂಬ ತಾಪವನ್ನಧಿಕಮಾಡುತ್ತಾನೆ. ಹಾಗೆಯೇ, ಆಚಾರ್ಯರ ಊರ್ಧ್ವಪುಂಡ್ರ ಭೂಷಿತವಾದ ಲಲಾಟ ಪ್ರದೇಶವನ್ನು ದರ್ಶನ ಮಾಡಿದ ಪ್ರತಿಯೊಬ್ಬ ಪ್ರಪನ್ನನಿಗೂ, ಅವನವನ ಆಧಿಭೌತಿಕ, ಆಧಿದೈವಿಕ ಮತ್ತು ಆಧ್ಯಾತ್ಮಿಕವೆಂದು ಹೇಳಲಾಗುವ ತಾಪತ್ರಯಗಳು ನೀಗಿ ಸಂತೋಷವುಂಟಾಗುವುದೊಂದೇ ಅಲ್ಲದೇ, ಪ್ರಪನ್ನರೆಲ್ಲರಿಗೂ ಪ್ರಾಣವಲ್ಲಭನಂತೆ ಅತಿಪ್ರಿಯನಾದ ಪರಮಾತ್ಮನನ್ನು ತಾವು ಎಂದು ಕೂಡುವಂತಾಗುತ್ತದೆಯೋ— ಎಂದು ಹಂಬಲಿಸುತ್ತಾ ಪರಮಾತ್ಮನನ್ನು ಕುರಿತು ತಪಿಸುವಂತಾಗುತ್ತದೆ. ಅಂದರೆ ಆಚಾರ್ಯ ದರ್ಶನದಿಂದ ತಪಸ್ಸನ್ನಾಚರಿಸುವ ಬುದ್ಧಿಯುಂಟಾಗುತ್ತದೆ. ಈ ಆಶಯದಿಂದಲೇ, ಆಚಾರ್ಯರ ಊರ್ಧ್ವಪುಂಡ್ರವನ್ನು ಚಂದ್ರನಿಗೆ ಹೋಲಿಸಿದ್ದಾರೆ.

ಪ್ರತಿಯೊಬ್ಬ ಚೇತನನೂ, ತಾಯಿಗರ್ಭದಲ್ಲಿದ್ದಾಗ ಅದಕ್ಕೆ ಹಿಂದಿನ ಜನ್ಮದಲ್ಲಿ ನಡೆದ ಎಲ್ಲ ವಿಷಯಗಳ ಸ್ಮೃತಿಯನ್ನೂ ಹೊಂದಿರುತ್ತಾನೆ. ಆದರೆ, ಮಾತೃಗರ್ಭದಿಂದ ಹೊರಬಿದ್ದ ಕೂಡಲೆ 'ಶಠ' ಎನ್ನುವ ವಾಯುವು ಚೇತನನನ್ನು ಆವರಿಸುತ್ತದೆ. ಆಕೂಡಲೇ ಹಿಂದಿನ ಜ್ಞಾನವೆಲ್ಲವನ್ನೂ ಕಳೆದುಕೊಳ್ಳುತ್ತಾನೆ. ಕಗ್ಗತ್ತಲಿನಲ್ಲಿ ಮುಳುಗಿದಂತಾಗಿ ಮಗು ಅಳುತ್ತದೆ. ಒಂದು ವೇಳೆ ಅಳದಿದ್ದರೆ, ಈ ಶಠವಾಯುವಿನ ಸಂಸರ್ಗವಿಲ್ಲದಂತಾಗಿ, ಸಂಸಾರಕ್ಕೆ ಬೀಳದೆ ಹಾಗೆಯೇ ಸಂಸಾರ ಚಕ್ರದಿಂದ ಮುಕ್ತಿಯನ್ನು ಪಡೆದು ಪರಮಾತ್ಮನನ್ನು ಸೇರುತ್ತೆ. ಆದುದರಿಂದಲೇ ಅಂತಹ ಶಿಶುವು ಕೂಡಲೇ ಸತ್ತುಹೋಗುತ್ತದೆ.

ನಮ್ಮಾಳ್ವಾರ್‌ರವರು ಈ ಲೋಕದಲ್ಲಿ ಅವತರಿಸಿದ ಕೂಡಲೆ, ಸ್ವಲ್ಪವೂ ಅಳಲಿಲ್ಲ. ಆದರೆ ಅನೇಕ ವರ್ಷಗಳ ಕಾಲ ಕಣ್ಣು ತೆರೆಯದಂತಿದ್ದು ಬದುಕಿದ್ದರು. ಅಂದರೆ ಶಠವಾಯುವಿನ ಆಕ್ರಮಣಕ್ಕೆ ಒಳಗಾಗದೆ ಶಠವಾಯುವನ್ನು ಜಯಿಸಿ, ಸದಾ ಮನಸ್ಸಿನಲ್ಲಿಯೇ ಪರಮಾತ್ಮನನ್ನು ಧ್ಯಾನಿಸುತ್ತಾ ಮನನಶೀಲರಾಗಿ ಮುನಿಗಳಾಗಿದ್ದರು. ಶಠವಾಯುವಿಗೆ ಶತ್ರುವಿನಂತೆ ಇದ್ದುದರಿಂದ 'ಶಠಸ್ಯ ಅರಿ'–'ಶಠಾರಿ' ಎಂಬ ಹೆಸರಿಗೆ ಪಾತ್ರರಾದರು. ಇವರು

ಪರಮಾತ್ಮನ ಅಡಿದಾವರೆಗಳ ಅವತಾರವೆಂದು ಪ್ರಸಿದ್ಧರಾಗಿದ್ದಾರೆ. ದೇವ-ಸ್ಥಾನಗಳಲ್ಲಿ ಪರಮಾತ್ಮನ ಅಡಿದಾವರೆಗಳಿಂದ ಅಕಿಂತವಾದ ಗೋಪುರ-ವೊಂದನ್ನು ಸಾಮಾನ್ಯವಾಗಿ ಶಾತ್ತುಮೊರೈ ಸಮಯದಲ್ಲಿ ಭಕ್ತಾದಿಗಳ ತಲೆಯ ಮೇಲೆ ಪರಮಾತ್ಮನ ಅನುಗ್ರಹರೂಪದಲ್ಲಿಡುವುದು ವಾಡಿಕೆಯಾಗಿದೆ. ಇತರ ಸಮಯದಲ್ಲಿ ಅದನ್ನು ದರ್ಶನ ಮಾಡಬಹುದು. ಇದರ ಆಶ್ರಯವೂ ಪರಮಾತ್ಮನ ಅಡಿದಾವರೆಗಳ ಸಂಸರ್ಗದಿಂದ ಅಥವಾ ದರ್ಶನದಿಂದ ಮುಂದೆ ನಮಗೆ ಶಠವಾಯುವಿನ ಬಾಧೆ ತಗುಲದೆ ಮುಕ್ತಿ ಲಭಿಸಿ ಪರಮಾತ್ಮನನ್ನು ಸೇರುವಂತಾಗಲಿ – ಎಂದು. ಅಂದರೆ ಮೇಲಿನ ಅರ್ಥದಲ್ಲಿ ಪರಮಾತ್ಮನ ಪಾದ-ಗಳಿಂದಂಕಿತವಾದ ಗೋಪುರವು–'ಶಠಾರಿ'– ಇದರ ಉದ್ದೇಶವೂ ಚೇತನೋ-ದ್ಧಾರ, ಅಂತೆಯೇ, ಇದರ ಮತ್ತೊಂದು ಸ್ವರೂಪವಾದ ನಮ್ಮಾಳ್ವಾರ್‌ರವರ ಅವತಾರದ ಉದ್ದೇಶ್ಯವೂ ಚೇತನೋದ್ಧಾರ, ಆದುದರಿಂದಲೇ ನಮ್ಮಾಳ್ವಾರ್‌ರ-ವರ ರೂಪಾಂತರವೇ 'ಶಠಾರಿ'–ಎನ್ನುತ್ತಾರೆ.

ನಮ್ಮ ಆಚಾರ್ಯರು, ಅವರ ತಲೆಯಲ್ಲಿ ನೀಳವಾಗಿಯೂ ಬಿಳುಪಾಗಿಯೂ ಬೆಳೆದಿದ್ದ ಕೂದಲನ್ನು (ಮುಡಿಯನ್ನು) ಕಟ್ಟಿಕೊಂಡಿದ್ದರು. ಇವರು ಸದಾ ಪರಮಾತ್ಮನ ಅಡಿದಾವರೆಗಳನ್ನು ತನ್ನ ತಲೆಯಮೇಲಿರುವಂತೆ ಧ್ಯಾನಿ-ಸುತ್ತಿದ್ದುದರಿಂದ, ಆ ಶಿಖೆಯೂ ಪರಮಾತ್ಮನ ಪಾದಗಳಿಂದ ಅಂಕಿತವಾಗಿ ಗೋಪುರವಾಗಿ 'ಶಠಾರಿ'ಯಂತೆಯೇ ಶೋಭಿಸುತ್ತಿದ್ದಿತು. ಶಠಾರಿಯ ದರ್ಶನದಂತೆಯೇ ಆಚಾರ್ಯರ ಈ ಶಿಖಾಬಂಧದ ದರ್ಶನದಿಂದಲೂ ಮುಂದೆ ನಮಗೆ ಶಠವಾಯುವಿನ ಸಂಸರ್ಗವಿಲ್ಲದೆ ಮುಕ್ತಿ ಲಭಿಸುತ್ತದೆ. ಆದುದರಿಂಲೇ ಆಚಾರ್ಯರ ಶಿಖೆಯನ್ನು, ಶಠಾರಿ ಮುನಿಗಳ ರೂಪಾಂತರದಂತೆ ಶೋಭಿಸುತ್ತಿ-ದ್ದಿತು–ಎಂದು ವರ್ಣನೆಮಾಡಿದ್ದಾರೆ. ಈ ರೀತಿಯಾದ ಆಚಾರ್ಯರ ಊರ್ಧ್ವಪುಂಡ್ರದಿಂದ ಶೋಭಿಸುವ ಲಲಾಟವೂ ಮತ್ತು ಅವರ ತಲೆಯಲ್ಲಿ ಶೋಭಿಸುವ ಶಿಖಾಬಂಧವೂ ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ–ಎಂದು ಪ್ರಾರ್ಥಿಸಿದ್ದಾರೆ.

**ಮುಖೇಂದ್ವಧಃಪಾತಿಕರೋತ್ಕರಾಕೃತಿ–**
**ಸ್ಫುಟಚ್ಛವಿಶ್ಮಶ್ರು ಪರಿಷ್ಕೃತೋರಸಂ ।**
**ಸಿತೋಪವೀತಂ ತುಳಸೀಸರೋರುಹಾಕ್ಷ–**
**ಮಾಲಿಕಾಲಂಕೃತ ಚಾರುಕಂಧರಂ ॥ ೧೨ ॥**

(ನಮ್ಮ ಆಚಾರ್ಯರ) **ಮುಖೇಂದು**–ಮುಖಚಂದ್ರನಿಂದ, **ಅಧಃಪಾತಿ**–ಕೆಳಮುಖವಾಗಿ ಪ್ರಸರಿಸುವ, ಕರ–ಕಿರಣಗಳಿಂದಲೂ, **ಉತ್ಕರಾಕೃತಿ**–ಮೇಲ್ಮುಖವಾಗಿ ಪ್ರಸರಿಸುವ ಕಿರಣಗಳಿಂದಲೂ, **ಸ್ಫುಟ**–ಅರಳಿದ, **ಛವಿ**–ಕಾಂತಿಯಿಂದ ಕೂಡಿದ, **ಶ್ಮಶ್ರು**–ಗಡ್ಡ ಮತ್ತು ಮೀಸೆಯಿಂದಲೂ, **ಪರಿಷ್ಕೃತ**–ಪರಿಷ್ಕರಿಸಲ್ಪಟ್ಟ, **ಉರಸಂ**–ವಕ್ಷಃಸ್ಥಲವೂ, **ಸಿತೋಪವೀತಂ**–ಬಿಳುಪಾದ ಯಜ್ಞೋಪವೀತ(ಜನಿವಾರ), **ತುಳಸೀಸರೋರುಹಾಕ್ಷಮಾಲಿಕಾ**–ತುಳಸೀಮಣಿ ಮತ್ತು ಪದ್ಮಾಕ್ಷಮಾಲಿಕೆಗಳಿಂದ, **ಅಲಂಕೃತ**–ಅಲಂಕರಿಸಲ್ಪಟ್ಟ, **ಚಾರು**-ಸುಂದರವಾದ, **ಕಂಧರಂ**–ಕುತ್ತಿಗೆಯೂ (ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ).

ಹಿಂದಿನ ಶ್ಲೋಕದಲ್ಲಿ ಆಚಾರ್ಯರ ಬಿಳುಪಾದ ಕೇಶಪಾಶದಿಂದ ಕೂಡಿದ ಶಿಖೆಯನ್ನು ವರ್ಣಿಸಿರುವುದರಿಂದ, ಆಚಾರ್ಯರ ವೃದ್ಧಾಪ್ಯದ ದಿವ್ಯಮಂಗಳ ವಿಗ್ರಹದ ವರ್ಣನೆಯನ್ನೇ ವಿಶೇಷವಾಗಿ ಶ್ರೀಮನ್ನಯಿನಾರಾಚಾರ್ಯರು ಈ ಸ್ತೋತ್ರದಲ್ಲಿ ಮಾಡಿದ್ದಾರೆ. "ಸ್ತನಕೇಶವತೀ ಸ್ತ್ರೀ ಸ್ಯಾತ್ ಲೋಮಶಾ ಪುರುಷಃ ಸ್ಮೃತಃ"—ಎಂದು ಲೌಕಿಕವಾಗಿ ಸ್ತ್ರೀಪುರುಷರ ಲಕ್ಷಣವನ್ನು ಹೇಳುವಲ್ಲಿ–ಸುಂದರವಾದ ಮತ್ತು ಪುಷ್ಟವಾದ ಸ್ತನ ಮತ್ತು ಕೇಶಪಾಶದಿಂದ ಕೂಡಿರುವುದೇ ಸ್ತ್ರೀಯ ಲಕ್ಷಣವೆಂದೂ, ಲಲಾಟ ಅಂಗೈ ಮತ್ತು ಪಾದ, ಅಂಗಾಲುಗಳನ್ನುಳಿದು ಉಳಿದ ಎಲ್ಲಾ ಇಂದ್ರಿಯಗಳಲ್ಲಿಯೂ ರೋಮರಾಜಿಯಿಂದ (ಗಡ್ಡ ಮೀಸೆಗಳಿಂದ ಕೂಡಿರುವುದೇ) ಪುರುಷನ ಲಕ್ಷಣವೆಂದೂ ವರ್ಣಿಸಿದ್ದಾರೆ.

ನಮ್ಮ ಆಚಾರ್ಯರ ಅವತಾರ ಕಾಲದಲ್ಲಿದ್ದ ದಿವ್ಯದೇಹದಲ್ಲಿ ಈ ಲೌಕಿಕ ವಾದ ಲಕ್ಷಣಗಳೂ ಪೂರ್ಣವಾಗಿ ಕೂಡಿದ್ದಿತು.

ಸಾಮುದ್ರಿಕ ಶಾಸ್ತ್ರದಲ್ಲಿ ಮನುಷ್ಯನ ಒಂದೊಂದು ಭಾಗವನ್ನೂ ವರ್ಣಿಸಿ ಅದರ ಫಲವನ್ನು ಹೇಳುವಲ್ಲಿ, ಐಹಿಕಾಮುಷ್ಮಿಕವಾದ ಸರ್ವಭೋಗ-ವನ್ನೂ ಅನುಭವಿಸುವ, ಸಂತೃಪ್ತರಾಗಿ, ಶಾಂತಿಯುತವಾದ ಮನಸ್ಕರ ಗಡ್ಡ ಮೀಸೆಯಾದರೋ, ಆಕರ್ಷಕವಾಗಿಯೂ ಎಡೆಬಿಡದೆ ಕೂಡಿಕೊಂಡಿರುವುದಾ-ಗಿಯೂ ಮಂಗಳಕರವಾಗಿಯೂ ಮತ್ತು ಮೃದುವಾಗಿಯೂ ಇರುತ್ತದೆ.— 'ಸಂಪೂರ್ಣಭೋಗಿನಾಂ ಕಾಂತಂಶ್ಮಶ್ರುಸ್ನಿಗ್ಧಂ ಶುಭಂ ಮೃದು'–ಎಂದು ವರ್ಣಿಸಿದ್ದಾರೆ. ಅಂತೆಯೇ ನಮ್ಮ ಆಚಾರ್ಯರ ಗಡ್ಡ ಮೀಸೆಗಳು ಮೇಲೆ ಹೇಳಿರುವ ಗುಣಗಳನ್ನು ಹೊಂದಿದುದಾಗಿತ್ತು. ಆಚಾರ್ಯರ ಮುಖಮಂಡಲ ಚಂದ್ರ ಬಿಂಬದಂತೆ ಸರ್ವರಿಗೂ ಆಹ್ಲಾದದಾಯಕವಾಗಿ ಶೋಭಿಸುತ್ತಿದ್ದಿತು. ಈ ಮುಖದಲ್ಲಿನ ಗಡ್ಡ ಮೀಸೆಯ ಕೂದಲುಗಳೆಲ್ಲವೂ ಕೆಳಮುಖವಾಗಿ ಕಾಂತಿ ಯುತವಾಗಿ, ಚಂದ್ರನ ಕಿರಣಗಳು ಅಧೋಮುಖವಾಗಿ ಪ್ರಸರಿಸಿ ಬೆಳಕನ್ನು ಚೆಲ್ಲುವಂತಿದ್ದಿತು. ಆಚಾರ್ಯರ ವಕ್ಷಸ್ಥಲವು ಉಬ್ಬಿದ ಎದೆಯಿಂದಲೂ, ವಿಶಾಲವಾಗಿ ಅರಳಿರುವಂತೆಯೂ ಇದ್ದು ಮೇಲ್ಮುಖವಾಗಿ ಕಾಂತಿಯನ್ನು ಬೀರುವಂತಿದ್ದು ಬಹಳ ಆಕರ್ಷಕವಾಗಿದ್ದಿತು. ಅದನ್ನು ನೋಡಲು ಚಂದ್ರನ ಕಿರಣವು ಕೆಳಮುಖವಾಗಿ ಪ್ರಸರಿಸಿ ಹೊಳಪಿನಿಂದ ಕೂಡಿದ ಪದಾರ್ಥಗಳ ಮೇಲೆ ಬಿದ್ದು ಪ್ರತಿಫಲಿತವಾಗುವಂತೆ ಇವರ ಮುಖಮಂಡಲದಿಂದ ಪ್ರಸರಿಸಿದ ಬ್ರಹ್ಮತೇಜೋಮಯವಾದ ಕಿರಣಗಳು ಇವರ ವಕ್ಷಸ್ಥಲದ ಮೇಲೆ ಬಿದ್ದು ಪ್ರತಿಫಲಿತವಾಗಿ ಮೇಲ್ಮುಖವಾಗಿ ಪ್ರಸರಿಸುತ್ತಿರುವಂತೆ ಶೋಭಿಸುತ್ತಿದ್ದಿತು. ವಸ್ತುವಿನಲ್ಲಿ ಸ್ವತಃ ಹೊಳಪಿದ್ದರೂ, ಚಂದ್ರನ ಕಿರಣ ಅದರ ಮೇಲೆ ಬಿದ್ದು ಪ್ರತಿಫಲಿಸುವಾಗ, ಕಿರಣಗಳಿಂದ ಪರಿಷ್ಕರಿಸಲ್ಪಟ್ಟು ಆ ವಸ್ತುವಿನ ಹೊಳಪು ವಿಶೇಷವಾಗಿ ಯಾವ ರೀತಿಯಲ್ಲಿ ಪ್ರಕಾಶಕ್ಕೆ ಬರುತ್ತದೋ, ಅಂತೆಯೇ ಆಚಾರ್ಯರ ಮುಖಮಂಡಲದ ಕಾಂತಿ, ಅವರ ಸ್ವತಃ ತೇಜಸ್ಸಿನಿಂದ ಕೂಡಿದ ವಕ್ಷಸ್ಥಲದ ಮೇಲೆ ಬಿದ್ದು ಪ್ರತಿಫಲಿತವಾಗುವುದರ ಮುಖಾಂತರ, ಅವರ

ಎದೆಯು ಪರಿಷ್ಕರಿಸಲ್ಪಟ್ಟು ಇನ್ನೂ ಅಧಿಕವಾಗಿ ಶೋಭಿಸುತ್ತಿದ್ದಿತು-ಎಂದು ವರ್ಣಿಸಿದ್ದಾರೆ.

ಆಚಾರ್ಯರು ಬಿಳುಪಾಗಿಯೂ ಪವಿತ್ರವಾಗಿಯೂ ಇರುವ ಯಜ್ಞೋಪವೀತವನ್ನು ತನ್ನ ಕುಕ್ಷಿಗೆಯಲ್ಲಿ ಧರಿಸಿದ್ದರು. ಈ ಯಜ್ಞೋಪವೀತದ ರಹಸ್ಯವು ಇಂತಿದೆ:- ಮಂಗಳಕರವಾದ ಪ್ರಪಂಚವನ್ನು ಸೃಷ್ಟಿಸಿದ ಪರಮಾತ್ಮನು ಹಿಂದೊಮ್ಮೆ ಸಮಾಹಿತ ಚಿತ್ತನಾಗಿ, ತ್ರಿಗುಣಾತ್ಮಕವಾದ ಪ್ರಪಂಚವೆಲ್ಲವನ್ನೂ ಸೂತ್ರದ (ದಾರದ) ರೂಪದಲ್ಲಿ ನೂಲಿದನು. ಬಳಿಕ ಅದರಿಂದಲೇ ಅದರಲ್ಲಿಯೇ ಇದ್ದ ಬ್ರಹ್ಮ, ವಿಷ್ಣು, ಮಹೇಶ್ವರರನ್ನೂ ಅಷ್ಟದಿಕ್ಪಾಲಕರನ್ನೂ ಸೃಷ್ಟಿಸಿದನು. ಅಂದರೆ ಅದರಲ್ಲಿ ತ್ರಿಮೂರ್ತಿಗಳ ಮತ್ತು ಅಷ್ಟದಿಕ್ಪಾಲಕರ ಸಾನ್ನಿಧ್ಯವಿರುವಂತೆ ಮಾಡಿದನು. ಈ ತ್ರಿಗುಣಾತ್ಮಕವಾದ ಪ್ರಪಂಚವನ್ನು ಜಯಿಸಿ ಮುಕ್ತಿಯನ್ನು ಹೊಂದಬೇಕಾದರೆ ವೇದಾಧ್ಯಯನ ಮಾಡಿ, ವೇದ ವಿಹಿತವಾದ ಕರ್ಮಾನುಷ್ಠಾನಗಳನ್ನು ಮಾಡುವುದು ಅತ್ಯವಶ್ಯಕ. ಆ ರೀತಿ ವೇದಾಧ್ಯಯನ ಮಾಡಲೂ ಮತ್ತು ವೇದವಿಹಿತ ಕರ್ಮಗಳನ್ನನುಷ್ಠಿಸಲು ಈ ಉಪವೀತಧಾರಣೆ ಮಾಡುವುದರಿಂದ ಅರ್ಹತೆಯುಂಟಾಗುತ್ತದೆ.

ಈ ಉಪವೀತವು ಮೊದಲು 'ಯಜ್ಞೋವೈವಿಷ್ಣುಃ'–ಎಂದು ಶ್ರುತಿಪಾದ್ಯನಾದ, ಯಜ್ಞಶಬ್ದವಾಚ್ಯನಾದ ಪರಮಾತ್ಮನಿಂದ ನೂಲಿದುದರಿಂದಲೂ, ಮತ್ತು ಯಜ್ಞಶಬ್ದವಾಚ್ಯನಾದ ಪರಮಾತ್ಮನನ್ನು ಆರಾಧಿಸಲು ಅರ್ಹತೆಯನ್ನುಂಟುಮಾಡುವುದರಿಂಲೂ, 'ಯಜ್ಞೋಪವೀತ'-ಎಂದು ಕರೆಯಲ್ಪಟ್ಟಿತು.

"ಸಿಸೃಕ್ಷುರೇಕವಿವಾಗ್ರೇ ಸಮಾಸೀನಃ ಶಿವಃ ಸ್ವಯಮ್ । ದೃಷ್ಟ್ವಾ ಗುಣಮಯೀಂ ಮಾಯಾಂ ಸೂತ್ರರೂಪಾಮಿವಾಕರೋತ್ ॥ ತಯಾ ತದಾತ್ಮಕಂ ವಿಷ್ಣುಂ ಸೃಷ್ಟ್ವಾಕಾಲಂದಿವೌಕಸಾಮ್ । ಸ್ವಯಂ ಭೂರಭವದುದ್ರಶ್ಚಾಸ್ಯ ಜಯಾಯ ಸಃ । ಯಜ್ಞಾರ್ಥಃ ಪರಮಾತ್ಮಾ ಯಃ ಉಚ್ಯತೇ ಚೈವ ಹೋತೃಭಿಃ । ಉಪವೀತಂ ತತೋಽಸ್ಯೇದಂ ತತ್ಸ್ಮಾದ್ಯಜ್ಞೋಪವೀತಕಮ್ । ........................ಬಹ್ಮಾಗ್ರೇಕಲ್ಪ ಯಾಮಾಸ ವೇದಾಹರ್ಾಣಾಮನುಕ್ರಮಮ್ । ಯೇನಾಂಸೇ ಧೃತ

ಮಾತ್ರೇಣ ಬ್ರಹ್ಮಸೂತ್ರೇಣ ತೇ ದ್ವಿಜಾಃ। ಭವಂತಿ ಬ್ರಾಹ್ಮಣಾನಾಮ ವೇದಾರ್ಹಾಶ್ಚ ತ್ರಯಸ್ತ್ರಿ ಚ॥" –ಎಂದು ಆಶ್ವಲಾಯನರು ಇದರ ರಹಸ್ಯ ವನ್ನು ಹೇಳಿದ್ದಾರೆ. ಈ ರೀತಿಯ ಯಜ್ಞೋಪವೀತವನ್ನು ಕೆಲಕೆಲ ಸನ್ನಿವೇಷ ಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಧರಿಸಬೇಕೆಂದು–"ನೀವೀತಂ ಮನುಷ್ಯಾಣಾಂ ಪ್ರಾಚೀನವೀತಂ ಪಿತೃಣಾಂಉಪವೀತಂ ದೇವನಾಂ"—ಎಂದು ಶ್ರುತಿಯೇ ಹೇಳುವಂತೆ, ಮನುಷ್ಯ ಉದ್ದೇಶ್ಯವಾಗಿ ಮಾಡುವ ಕರ್ಮಗಳಲ್ಲಿ ಕತ್ತಿಗೆ ಮಾಲೆಯಂತೆ ಬೆನ್ನಿನ ಭಾಗದಲ್ಲಿ ಈ ಸೂತ್ರವನ್ನು ಧರಿಸಬೇಕೆಂದೂ, ಪಿತೃ ಕಾರ್ಯವನ್ನು ಮಾಡುವಲ್ಲಿ ಬಲಭುಜದ ಮೇಲೆ ಮತ್ತು ಎಡಗಡೆಯ ತೋಳಿನ ಕೆಳಭಾಗದಲ್ಲಿ ಸೂತ್ರವಿರುವಂತೆಯೂ ಮತ್ತು ದೇವತಾ ಕೆಲಸಗಳಲ್ಲಿ ಎಡ–ಭುಜದ ಮೇಲೂ ಬಲತೋಳಿನ ಕೆಳಭಾಗದಲ್ಲಿಯೂ ಸೂತ್ರವಿರುವಂತೆಯೂ ಧರಿಸಬೇಕು. ಇದರಲ್ಲಿ ಮನುಷ್ಯ ಕರ್ಮಗಳಲ್ಲಿ ಧರಿಸುವಿಕೆಗೆ 'ನಿವೀತ'ವೆಂದೂ ಪಿತೃಗಳಲ್ಲಿನ ಧರಿಸುವಿಕೆಗೆ –'ಪ್ರಾಚೀನಾವೀತ' ಎಂದೂ ಮತ್ತು ದೇವತಾ ಕರ್ಮಗಳಲ್ಲಿನ ಧರಿಸುವಿಕೆಗೆ 'ಉಪವೀತ'ವೆಂದೂ ಹೆಸರು. ಈ ಉಪವೀತವು ಕೆಲ ಸನ್ನಿವೇಶಗಳಲ್ಲಿ ವಿಸರ್ಜಿಸಬೇಕು ಮತ್ತೆ ಕೆಲ ಸನ್ನಿವೇಶಗಳಲ್ಲಿ ಧರಿಸ ಬೇಕೆಂದೂ ಹೇಳಿದೆ. ಗ್ರಂಥಬಾಹುಳ್ಯದ ಭಯದಿಂದ ಈ ವಿಷಯದ ವಿವರಣೆ ನಿಲ್ಲಿಸಿದ್ದೇನೆ. ಕಶ್ಮಲದೂಷಿತವಾದ ಉಪವೀತವನ್ನು ತ್ಯಾಗಮಾಡಿ ನೂತನ ಯಜ್ಞೋಪವಿತವನ್ನು ಧರಿಸಬೇಕು.

ನಮ್ಮ ಆಚಾರ್ಯರು ಯಾವಾಗಲೂ ದೇವತಾ ಸಾರ್ವಭೌಮನಾದ ಪರಮಾತ್ಮನ ಆರಾಧನೆಯಲ್ಲಿ ಅಧಿಕವಾಗಿ ತೊಡಗುತ್ತಿದ್ದುದರಿಂದ ಬಿಳುಪಾದ, ಮೇಲೆ ವಿವರಿಸಿದ ಯಜ್ಞಸೂತ್ರವನ್ನು ಸದಾ ಉಪವೀತವಾಗಿಯೇ ಧರಿಸು–ತ್ತಿದ್ದರು. ಸದಾ ಪರಮಾತ್ಮನ ಚಿಂತೆಯಲ್ಲಿಯೇ ಇದ್ದುದರಿಂದ, ಅಶುಚಿಗೆ ಕಾರಣವೇ ಇಲ್ಲದೆ ಈ ಸೂತ್ರವು ಪವಿತ್ರವಾಗಿಯೇ ಇದ್ದಿತು.

ಲೋಕದಲ್ಲಿ ಅಯಸ್ಕಾಂತವನ್ನು ಭೂಮಿಯ ಮಣ್ಣಿನಲ್ಲಿ ಉಜ್ಜಿದಾಗ, ಅದರಿಂದ ಆಕರ್ಷಿತವಾಗುವ ಕಬ್ಬಿಣದ ಅದಿರು ಅದಕ್ಕೆ ಅಂಟಿಕೊಳ್ಳುತ್ತದೆ.

ಅಂತೆಯೇ ಪರಮಾತ್ಮನ ಸೃಷ್ಟಿಯಲ್ಲಿ ತ್ರಿಗುಣಾತ್ಮಕವಾದ ಪ್ರಪಂಚವನ್ನು ಸೃಷ್ಟಿಸಿದಂತೆಯೇ ತ್ರಿಗುಣಾತ್ಮಕವಾದ ದೇವತೆಗಳನ್ನೂ ಸೃಷ್ಟಿಸಿದನು. ಆಯಾಯಾ ದೇವತೆಗಳ ಗುಣಗಳಿಗನುಗುಣವಾಗಿ ಆಯಾಯಾ ಗುಣಗಳುಳ್ಳ ವಸ್ತುಗಳೂ ಆಯಾಯಾ ದೇವತೆಗಳಿಗೆ ಪ್ರಿಯವಾಗಿರುತ್ತವೆ. ಆ ವಸ್ತುಗಳನ್ನು ಧರಿಸುವುದರಿಂದ, ಆ ದೇವತೆಗಳು ಪ್ರೀತರಾಗಿ ಆಕರ್ಷಿಸಲ್ಪಟ್ಟು ಆ ವಸ್ತುವನ್ನು ಧರಿಸುವ ವ್ಯಕ್ತಿಯ ಬಳಿ ಸದಾ ಸನ್ನಿಹಿತರಾಗುತ್ತಾರೆ. ಆದುದರಿಂದಲೇ ಸತ್ವಗುಣಭೂಯಿಷ್ಠವಾದ ತುಳಸೀಮಣಿ ಮತ್ತು ಪದ್ಮಾಕ್ಷ ಮಾಲಿಕೆಗಳು ನಿತ್ಯ ಶುದ್ಧ ಸತ್ವಮಯವಾದ ವಿಷ್ಣುವಿನ ಮನಸ್ಸನ್ನೋಲಿಸಿ, ಅದನ್ನು ಧರಿಸುವ ವ್ಯಕ್ತಿಗಳಲ್ಲಿ ಅವನ ಪರಿಪೂರ್ಣವಾದ ಸಾನ್ನಿಧ್ಯವೇರ್ಪಡುವಂತೆ ಮಾಡುತ್ತದೆ. ಆದುದರಿಂದ ನಮ್ಮ ಆಚಾರ್ಯರೂ ಶ್ರೀಮನ್ನಾರಾಯಣನ ಉಪಾಸಕರಾಗಿ ಅವನ ಸಾನ್ನಿಧ್ಯ ಬೇಡುತ್ತಿದ್ದುದರಿಂದ, ತಮ್ಮ ಕುತ್ತಿಗೆಯಲ್ಲಿ ಸದಾ ತುಳಸೀಮಣಿ ಮತ್ತು ಪದ್ಮಾಕ್ಷಮಾಲಿಕೆಗಳನ್ನು ಧರಿಸಿ, ವಿಷ್ಣುವಿನ ಸಾನ್ನಿಧ್ಯವನ್ನು ಹೊಂದಿ ಸತ್ತ್ವಗುಣಮೂರ್ತಿಯಾಗಿ ಶೋಭಿಸುತ್ತಿದ್ದರು. ಈ ರೀತಿ ಇರುವ ಆಚಾರ್ಯರ ದಿವ್ಯಮಂಗಳ ವಿಗ್ರಹವು ನನ್ನ ಕಣ್ಣುಗಳಿಂದ ಸಾಕ್ಷಾತ್ಕರಿಸುವಂತಾಗಲಿ ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿದ್ದಾರೆ.

**ಸುಜಾತಚರಣಾಂಬುಜಂ ಸುದೃಢಗುಲ್ಫಜಾನೂರುಕಂ |**
**ಸಿತಾಂತರಕಟೀತಟಂ ಸುಭಗನಾಭಿವಕ್ಷೋಗಳಂ |**
**ಸುದೀರ್ಘಯುಗಬಾಹುಕಂ ಶುಭಕಪೋಲನಾಸಾಕ್ಷಿಕಂ**
**ಮನೋರುಚಿರಮಾಲಿಕಂ ಕಲಯ ವೇಂಕಟೇಶಂ ಗುರುವರ್ ||೧೨||**

(ಎಲೈ ಮನಸ್ಸೇ ! ನೀನು) **ಸುಜಾತಚರಣಾಬುಜಂ**-ರಮಣೀಯ ಅಡಿದಾವರೆಗಳುಳ್ಳ, **ಸುದೃಢಗುಲ್ಫಜಾನೂರುಕಂ** – ಬಲಿಷ್ಠವಾಗಿಯೂ ಸುಂದರವಾಗಿಯೂ ಇರುವ ಮೊಣಕಾಲು ಮಂಡಿ ಮತ್ತು ತೊಡೆಗಳಿಂದ ಕೂಡಿದ, **ಸಿತಾಂತರಕಟೀತಟಂ**-ಬಿಳುಪಾದ ವಸ್ತ್ರದಿಂದ ಕೂಡಿದ ಸೊಂಟ ಭಾಗವುಳ್ಳ, **ಸುಭಗನಾಭಿವಕ್ಷೋಗಳಂ**-ರಮಣೀಯವಾದ ಹೊಕ್ಕಳು, ಎದೆ ಮತ್ತು ಕುತ್ತಿಗೆಯ ಪ್ರದೇಶವುಳ್ಳ, **ಸುದೀರ್ಘಯುಗಬಾಹುಕಂ**-ಸುಂದರ

ವಾಗಿಯೂ ನೀಳವಾಗಿಯೂ ಇರುವ ಎರಡು ತೋಳುಗಳುಳ್ಳ, **ಶುಭಕಪೋಲ-ನಾಸಾಕ್ಷಿಕಂ**-ಮಂಗಳಕರವಾದ ಕೆನ್ನೆ, ಮೂಗು ಮತ್ತು ಕಣ್ಣುಗಳುಳ್ಳ, **ಮನೋರುಚಿರಮಾಲಿಕಂ**-ಮನಸ್ಸಿಗೆ ಸಂತೋಷವನ್ನುಂಟುಮಾಡುವ ಪುಷ್ಪಮಾಲಿಕೆಯನ್ನು ಮಾರಾಟ ಮಾಡುವ, **ವೇಂಕಟೇಶಂಗುರುಂ**-ಗುರುಗಳಾದ ಶ್ರೀ ಮದ್ವೇಂಕಟನಾಥರನ್ನು, **ಕಲಯ**-ನೋಡುತ್ತಿರು.

ಶ್ರೀ ಮದ್ಭಾಗವತದ ೨ನೆಯ ಸ್ಕಂದದ ೨ನೆಯ ಅಧ್ಯಾಯದಲ್ಲಿ ಶ್ರೀ ಶುಕಬ್ರಹ್ಮರು ಪರೀಕ್ಷಿತ ಮಹಾರಾಜನಿಗೆ ಹೃತ್ಕಮಲದಲ್ಲಿ ಪರಮಾತ್ಮನ ದಿವ್ಯಮಂಗಳ ಮೂರ್ತಿಯ ಒಂದೊಂದು ಅಂಗವನ್ನೂ ಪಾದಾದಿಕೇಶಾಂತವಾಗಿ ವರ್ಣಿಸಿ, ಈ ಒಂದೊಂದು ಅಂಗವನ್ನೇ ಮನಸಾ ಧ್ಯಾನಿಸಿ, ಒಂದೊಂದು ಅಂಗವೂ ಮನಸ್ಸಿನಲ್ಲಿ ಸ್ಥಿರಗೊಂಡ ಬಳಿಕ ಮತ್ತೊಂದು ಅಂಗವನ್ನು ಧ್ಯಾನಿಸಬೇಕೆಂದೂ, ಮತ್ತೆ ಮತ್ತೆ ಹೀಗೆಯೇ ಧ್ಯಾನಿಸುತ್ತಾ ಪರಿಪೂರ್ಣವಾದ ದಿವ್ಯಮಂಗಳ ಮೂರ್ತಿಯನ್ನು ಧ್ಯಾನಿಸಬೇಕೆಂದು—

**''ಏಕೈಕಶೋಽಂಗಾನಿ ಧಿಯಾನುಭಾವಯೇತ್**
**ಪಾದಾದಿಯಾವದ್ಧಸಿತಂಗದಾಭೃತಃ ।**
**ಜಿತಂ ಜಿತಂ ಸ್ಥಾನಮಪೋಹ್ಯಧಾರಯೇತ್**
**ಪರಂಪರಂ ಶುದ್ಧ್ಯತಿ ಧೀರ್ಯಥಾಯಥಾ"** ॥-ಎಂದು ಹೇಳಿದ್ದಾರೆ.

ಈ ಸ್ತೋತ್ರದಲ್ಲಿ ನಯಿನಾರಾಚಾರ್ಯರು ೩ನೆಯ ಶ್ಲೋಕದಿಂದ ೧೨ನೆಯ ಶ್ಲೋಕಪೂರ್ತಿ ೧೦ ಶ್ಲೋಕಗಳಲ್ಲಿ ವಿವರವಾಗಿ ಆಚಾರ್ಯರ ದಿವ್ಯ ಮಂಗಳ ವಿಗ್ರಹದ ಒಂದೊಂದು ಭಾಗವನ್ನೂ ಬಿಡಿಬಿಡಿಯಾಗಿ ಪಾದಾದಿ ಕೇಶಾಂತ ವರ್ಣಿಸಿ, ಈಗ ಮನದಟ್ಟಾಗಲು ಮತ್ತೆ ಒಂದೊಂದೇ ಶ್ಲೋಕದಲ್ಲಿ ೧೩ ಮತ್ತು ೧೪ನೆಯ ಶ್ಲೋಕದಲ್ಲಿ ಆಚಾರ್ಯರ ದಿವ್ಯ ಮಂಗಳ ವಿಗ್ರಹವನ್ನು ಪೂರ್ಣವಾಗಿ ವರ್ಣಿಸಿದ್ದಾರೆ.-

ಈ ಶ್ಲೋಕದಲ್ಲಿ ಆಚಾರ್ಯರಿಗೆ 'ಮನೋರುಚಿರಮಾಲಿಕಂ'-ಎಂಬ ವಿಶೇಷಣವೊಂದನ್ನು ಬಳಸಿದ್ದಾರೆ. ಮೊದಲನೆಯ ಶ್ಲೋಕದ 'ಮನಃಪ್ರಸೂನ

ಸ್ತಬಕಂ' ಎಂಬ ವಿಶೇಷಣವನ್ನು ವರ್ಣಿಸಿರುವಲ್ಲಿ ಹೇಳಿರುವ ಅಹಿಂಸಾದಿ ಎಂಟು ವಿಧವಾದ ಪುಷ್ಪಗಳೂ ವಿಷ್ಣುವಿಗೆ ಬಹಳ ಪ್ರೀತಿಕರವಾಗಿರುತ್ತವೆ. ಆದುದರಿಂದ ಈ ಎಂಟು ವಿಧವಾದ ಪುಷ್ಪಗಳಿಂದ ಕಟ್ಟಿದ ಮಾಲಿಕೆಯನ್ನೇ ಪರಮಾತ್ಮನಿಗೆ ಅರ್ಪಣ ಮಾಡಬೇಕು. ಅದರಿಂದಲೇ ಮನಸ್ಸಿನ ತಾಪಗಳು ತೊಲಗಿ ಸಂತೋಷವುಂಟಾಗುತ್ತದೆ. ಈ ಅಹಿಂಸಾದಿ ಎಂಟು ವಿಧವಾದ ಗುಣಗಳೂ ನಮಗುಂಟಾಗಬೇಕಾದರೆ ಆಚಾರ್ಯರ ಅನುಗ್ರಹವು ಪ್ರಧಾನವಾಗಿರಬೇಕು. ಆದುದರಿಂದ ಈ ತರಹವಾದ ಎಂಟು ವಿಧವಾದ ಪುಷ್ಪಗಳಿಂದ ಕಟ್ಟಿದ ಮಾಲಿಕೆಯನ್ನು ಮಾರಾಟಮಾಡುವವರೇ ನಮ್ಮ ಆಚಾರ್ಯರೆಂದು 'ಮನೋರುಚಿರಮಾಲಿಕಂ'-ಎಂಬ ಪದದಿಂದ ವರ್ಣಿಸಿದ್ದಾರೆ.

ಈ ರೀತಿಯಾದ ನಮ್ಮ ಆಚಾರ್ಯರ ಒಂದೊಂದು ಅಂಗವನ್ನೂ, ಯಾವ ಒಂದು ಅಂಗವನ್ನೂ ಬಿಡದಂತೆ, 'ಎಲೈ ಮನಸ್ಸೇ! ನೀನು ವೀಕ್ಷಿಸುತ್ತಿರು'– ಎಂದು ಮನಸ್ಸನ್ನು ಕುರಿತು ಹೇಳಿದ್ದಾರೆ.

**ರಥಾಂಗ ಜಲಜಾಂಕಿತಃ ಸುಲಲಿತೋರ್ಧ್ವಪುಂಡ್ರೋಜ್ಜ್ವಲಃ**
**ಸರೋಜತುಳಸೀಮಣಿ ಗ್ರಥಿತಮಾಲಿಕಾಭೂಷಣಃ ।**
**ಸಿತಾಂಶುಕಯುಗಾಂಚಿತಸ್ಮಿತ ಮುಖೋದಯಾ ಶೀತಳಃ ।**
**ಚಕಾಸ್ತು ಹೃದಿ ಮೇ ಸದಾ ಸ ಗುರುವೇಂಕಟಾಧೀಶ್ವರಃ ।।೧೪।।**

ರಥಾಂಗ-ಸುದರ್ಶನಚಕ್ರದಿಂದಲೂ, ಜಲಜ–ಪಾಂಚಜನ್ಯವೆಂಬ ಶಂಖದಿಂದಲೂ, ಅಂಕಿತ-ಚಿಹ್ನಿತರಾಗಿ, ಸುಲಲಿತೋರ್ಧ್ವಪುಂಡ್ರೋಜ್ಜ್ವಲಃ –ಲಲಿತವಾದ ದ್ವಾದಶೋರ್ಧ್ವಪುಂಡ್ರಗಳಿಂದಲೂ (ಹನ್ನೆರಡು ನಾಮಗಳಿಂದ) ಪ್ರಕಾಶಿಸುತ್ತಿರುವ, ಸರೋಜ ತುಳಸೀಮಣಿಗ್ರಥಿತಮಾಲಿಕಾಭೂಷಣಃ– ಪದ್ಮಾಕ್ಷ ಮತ್ತು ತುಳಸೀಮಣಿಗಳಿಂದ ಪೋಣಿಸಲ್ಪಟ್ಟ ಮಾಲಿಕೆಗಳಿಂದ ಅಲಂಕರಿಸಲ್ಪಟ್ಟಿರುವ, ಸಿತಾಂಶುಕಯುಗಾಂಚಿತ–ಬಿಳುಪಾದ ಪಂಚೆ ಮತ್ತು ಉತ್ತರೀಯಗಳನ್ನು ಧರಿಸಿ ಮನೋಹರವಾದ, ಸ್ಮಿತಮುಖೋದಯಾ-ಶೀತಳಃ–ಮುಗುಳ್ನಗೆಯನ್ನು ಬಿರುತ್ತಾ ತಣ್ಣಗಿರುವ(ಮನಸ್ಕರಾದ), ಸಃ-ಆ,

**ಗುರುವೇಂಕಟಾಧೀಶ್ವರಃ**–ವೇಂಕಟನಾಥಗುರುಗಳು, **ಸದಾ**–ಎಲ್ಲ ಕಾಲದಲ್ಲಿಯೂ, **ಮೇ**-ನನ್ನ, **ಹೃದಿ**–ಹೃದಯ (ಕಮಲ)ದಲ್ಲಿ, **ಚಕಾಸ್ತು**–ಪ್ರಕಾಶಿಸಲಿ. ||೨೪||

ಆಚಾರ್ಯರ ದಿವ್ಯಮಂಗಳ ಮೂರ್ತಿಯ ವರ್ಣನೆಯು ಮುಖಾಂತರ ಪ್ರತಿಯೊಬ್ಬ ಶ್ರೀ ವೈಷ್ಣವನೂ ಹೊಂದಿರಬೇಕಾದ ಲಕ್ಷಣವನ್ನೂ ಈ ಶ್ಲೋಕದಲ್ಲಿ ಕುಮಾರ ನಯಿನಾರಾಚಾರ್ಯರು ವರ್ಣಿಸಿದ್ದಾರೆ.

ಹಿಂದೊಮ್ಮೆ ಯಮ ಮತ್ತು ಅವನ ಕಿಂಕರನಿಗೆ ಸಂವಾದ ನಡೆದಾಗ, ಯಮನು ಪಾಶವನ್ನು ಕೈಯಲ್ಲಿ ಹಿಡಿದಿದ್ದ ಕಿಂಕರರಿಗೆ ರಹಸ್ಯವಾಗಿ ಕಿವಿಯಲ್ಲಿ ಹೇಳಿದನು–"ಮಧುಸೂದನನ ಅಡಿದಾವರೆಯಲ್ಲಿ ಶರಣಾಗತಿಯನ್ನು ಮಾಡಿದವರನ್ನು ಬಿಟ್ಟುಬಿಡಿ, ನಾನು ವಿಷ್ಣುಭಕ್ತರನ್ನು ಬಿಟ್ಟು ಉಳಿದವರಿಗೆ ಮಾತ್ರ ಪ್ರಭುವಾಗಿದ್ದೇನೆ."

**"ಸ್ವಪುರುಷಮಭಿವೀಕ್ಷ್ಯ ಪಾಶಹಸ್ತಂ ವದತಿ ಯಮಃ ಕಿಲ ತಸ್ಯ ಕರ್ಣಮೂಲೇ ।**
**ಪರಿಹರ ಮಧುಸೂದನಪ್ರಪನ್ನಾನ್ ಪ್ರಭುರಹಂ ಅನ್ಯನೃಣಾಂ ನ ವೈಷ್ಣವಾನಾಂ" ||—**

ಎಂದು. ಆಗ ಯಮಕಿಂಕರನು ವಿಷ್ಣುಭಕ್ತನಾರು ? ಅವನ ಲಕ್ಷಣಗಳಾವುವು ? ಎಂದು, ಕೇಳಿದಾಗ ಯಮನು ಹೇಳುತ್ತಾನೆ—'ಯಾವನು ತನ್ನ ವರ್ಣಧರ್ಮಗಳನ್ನು ಬಿಡದೇ ಪರಿಪಾಲಿಸುತ್ತಾನೆಯೋ, ಯಾವನು ತನ್ನ ಸ್ನೇಹಿತರಲ್ಲಾಗಲೀ ತನ್ನನ್ನು ದ್ವೇಷಿಸುವವರಲ್ಲಾಗಲೀ ಒಂದೇ ರೀತಿ ವರ್ತಿಸುತ್ತಾನೆಯೋ, ಯಾವನು ಮತ್ತೊಬ್ಬರ ಸ್ವತ್ತನ್ನೂ ಅಪಹರಿಸುವುದಿಲ್ಲವೋ, ಯಾರನ್ನೂ ಹಿಂಸಿಸುವುದಿಲ್ಲವೋ, ಪರಿಶುದ್ಧವಾದ ಮನಸ್ಸುಳ್ಳವನೋ-ಅವನನ್ನು ವಿಷ್ಣುಭಕ್ತನೆಂದು ತಿಳಿ.

**"ನ ಚಲತಿ ನಿಜವರ್ಣಧರ್ಮತೋಯಃ ಸಮಮತಿರಾತ್ಮಸುಹೃದ್ವಿಪಕ್ಷೇ । ನಹರತಿ ನಚ ಹನ್ತಿ ಕಿಂಚಿದುಚ್ಚೈಃ ಸಿತಮನಸಂತಮವೇಹಿ ವಿಷ್ಣು ಭಕ್ತಂ॥"**

'ಯಾರು ತನ್ನ ಕುತ್ತಿಗೆಯಲ್ಲಿ ತುಲಸೀಮಣಿ ಮತ್ತು ಪದ್ಮಾಕ್ಷಮಾಲಿಕೆಯನ್ನು ಧರಿಸಿರುತ್ತಾರೆಯೋ, ಯಾರು ತನ್ನ ತೋಳುಗಳ ಮೇಲ್ಭಾಗದಲ್ಲಿ ಶಂಖಚಕ್ರದ ಚಿಹ್ನೆಯನ್ನು ಹೊಂದಿರುತ್ತಾರೆಯೋ, ಹಣೆಯಲ್ಲಿ ಯಾರು ಪ್ರಕಾಶಿಸುವ ಉರ್ಧ್ವಪುಂಡ್ರವನ್ನು ಧರಿಸಿರುತ್ತಾರೆಯೋ, ಅವರೇ ತಮ್ಮ ಸಂಸರ್ಗದಿಂದ ಇಡೀ ಭೂಮಂಡಲವನ್ನೇ ಪವಿತ್ರಗೊಳಿಸುವ ಮಹಿಮಾನ್ವಿತರಾದ ವಿಷ್ಣು ಭಕ್ತರು'.—**"ಯೇ ಕಂಠಲಗ್ನ ತುಳಸೀನಳಿನಾಕ್ಷಮಾಲಾಃ ಯೇ ಬಾಹುಮೂಲಪರಿಚಿಹ್ನಿತಶಂಖಚಕ್ರಾಃ । ಯೇ ವಾ ಲಲಾಟ-ಫಲಕೇ ಲಸದೂರ್ಧ್ವಪುಂಡ್ರಾಃ ತೇ ವೈಷ್ಣವಾ ಭುವನಮಾಶು-ಪವಿತ್ರಯಂತಿ ॥"**

'ಯಾರು ಕಮಲನಯನ ! ವಾಸುದೇವ ! ವಿಷ್ಣೋ ! ಧರಣಿಧರ ! ಅಚ್ಯುತ ! ಶಂಖಚಕ್ರಪಾಣೇ ! ನೀನೇ ನನಗೆ ಶರಣು (ರಕ್ಷಕ)'–ಎಂದು ಹೇಳುತ್ತಿರುತ್ತಾರೆಯೋ, ಅವರು ಪಾಪದ ಸೋಂಕೂ ಇಲ್ಲದವರು. ಅವರನ್ನು ಎಲೈ ಭಟನೇ ! ದೂರದಲ್ಲಿಯೇ ಬಿಟ್ಟುಬಿಡು' **"ಕಮಲನಯನ ! ವಾಸುದೇವ ! ವಿಷ್ಣೋ ! ಧರಣಿಧರ ! ಅಚ್ಯುತ ! ಶಂಖಚಕ್ರಪಾಣೇ ಭವಶರಣಮಿತೀರಯಂತಿ ಯೇ ವೈ ತ್ಯಜಭಟ ! ದೂರತರೇಣ ತಾನ-ಪಾಪಾನ್"**–ಎಂದು.

ಅವತಾರ ಕಾಲದಲ್ಲಿ ಈ ಮೇಲಿನ ವಿಷ್ಣು ಭಕ್ತರ ಲಕ್ಷಣಗಳೆಲ್ಲವೂ, ನಮ್ಮ ಆಚಾರ್ಯರಲ್ಲಿ ಪೂರ್ಣವಾಗಿದ್ದುವು. ಅವುಗಳಲ್ಲಿ ಮೊದಲು ಮತ್ತು ಮೂರನೆಯ ಶ್ಲೋಕದಲ್ಲಿ ಹೇಳಿರುವ ಗುಣಗಳು ಆಚಾರ್ಯರಲ್ಲಿದ್ದುದನ್ನೂ 'ವೇದಾಂತ ದೇಶಿಕರ ದಿನಚರಿ' ಗ್ರಂಥದಲ್ಲಿ ನೋಡಿ ತಿಳಿದುಕೊಳ್ಳಬಹುದು. ೨ನೆಯ ಶ್ಲೋಕದಲ್ಲಿನ ವಿಷ್ಣು ಭಕ್ತರ ಗುಣವನ್ನು ಇಂದೂ ನಮ್ಮಗಳಿಗೆ ಕಾಣುವ ಅವರ ಅರ್ಚಾಮೂರ್ತಿಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಅದನ್ನೇ ಈ ಶ್ಲೋಕದಲ್ಲಿಯೂ ವರ್ಣಿಸಿದ್ದಾರೆ.

ಆಚಾರ್ಯರ ದಿವ್ಯಮಂಗಳ ಮೂರ್ತಿಯಲ್ಲಿ ತೋಳುಗಳ ತುದಿ-ಭಾಗದಲ್ಲಿ ಶಂಖಚಕ್ರದ ಚಿಹ್ನೆಗಳು ಸ್ಪಷ್ಟವಾಗಿ ಕಾಣುತ್ತಿವೆ. ಹಣೆಯಲ್ಲಿ ಪ್ರಕಾಶವಾಗಿರುವ ಊರ್ಧ್ವಪುಂಡ್ರವು ಶೋಭಿಸುತ್ತಿದೆ. ಕುತ್ತಿಗೆಯಲ್ಲಿ ತುಳಸೀಮಣಿ ಮತ್ತು ಪದ್ಮಾಕ್ಷ-ಮಾಲಿಕೆಗಳಿಂದ ಅಲಂಕೃತರಾಗಿದ್ದಾರೆ. ಪರಿಶುದ್ಧವಾದ ಬಿಳುಪಾದ ಪಂಚೆ ಮತ್ತು ಉತ್ತರೀಯವನ್ನೂ ಧರಿಸಿ-ದ್ದಾರೆ. ಈ ರೀತಿ ಅಲಂಕೃತರಾದ ಆಚಾರ್ಯರು ಮುಗುಳ್ನಗೆಯನ್ನು ಬೀರುತ್ತಾ, ತಮ್ಮನ್ನಾಶ್ರಯಿಸಿದ ಶಿಷ್ಯವರ್ಗದಲ್ಲಿ ದಯೆಯಿಂದ ತೊಯ್ದ-ಮನಸ್ಸುಳ್ಳವರಾಗಿ, ತಮ್ಮ ಕೃಪಾಕಟಾಕ್ಷದಿಂದ ನಮ್ಮೆಲ್ಲರ ಪಾಪಗಳನ್ನೂ ಹೋಗಲಾಡಿಸುವ ಶೀತಲ ಸ್ವಭಾವವನ್ನೂ ಹೊಂದಿದವರಾಗಿದ್ದಾರೆ. ಈ ರೀತಿಯ ಆಚಾರ್ಯರ ದಿವ್ಯಮಂಗಳ ಮೂರ್ತಿಯು ಎಲ್ಲ ಕಾಲದಲ್ಲಿಯೂ ನನ್ನ ಹೃದಯದಲ್ಲಿ ಪ್ರಕಾಶಿಸುತ್ತಿರಲಿ-ಎಂದು ಈ ಪದ್ಯದಲ್ಲಿ ಪ್ರಾರ್ಥಿಸಿ-ದ್ದಾರೆ.

ಈ ಪದ್ಯದಲ್ಲಿ ಆಚಾರ್ಯರ ದಿವ್ಯಮಂಗಳ ಮೂರ್ತಿಯನ್ನು ವರ್ಣಿ-ಸುವುದರೊಡನೆ, ವಿಷ್ಣುಭಕ್ತರಾದ ನಾವೆಲ್ಲರೂ ಭಾಹ್ಯಾಭ್ಯಂತರಗಳಲ್ಲಿ ಯಾವ ರೀತಿ ಇರಬೇಕು ಎನ್ನುವ ಉಪದೇಶವನ್ನೂ ಕೊಟ್ಟಿದ್ದಾರೆ.

**ಯ ಇಮಾಂ ದಿನಚರ್ಯಾಂ ಚ ವಿಗ್ರಹಧ್ಯಾನಪದ್ಧತಿಂ ।**
**ವರದಾರ್ಯಕೃತಾಂ ಭಕ್ತ್ಯಾ ಶೀಲಯೇನ್ಮುಕ್ತ ಏವ ಸಃ ॥೧೫॥**

**ಯಃ** = ಯಾವನು, **ವರದಾರ್ಯಕೃತಾಂ** = ಕುಮಾರ ವರದಾ-ಚಾರ್ಯರಿಂದ ರಚಿಸಲ್ಪಟ್ಟ, **ದಿನಚರ್ಯಾಂ** = ವೇದಾಂತದೇಶಿಕರ ದಿನ-ಚರಿಯನ್ನೂ, **ಚ** = ಮತ್ತು, **ವಿಗ್ರಹಧ್ಯಾನಪದ್ಧತಿಂ** = '**ವಿಗ್ರಹಧ್ಯಾನ ಪದ್ಧತಿ**' ಎಂಬ ಈ ಪದ್ಯಮಾಲಿಕೆಯನ್ನೂ, **ಭಕ್ತ್ಯಾ** = ಭಕ್ತಿಯಿಂದ, **ಶೀಲಯೇತ್** = ಅನುಸಂಧಾನ ಮಾಡುತ್ತಾನೆಯೋ, **ಸಃ** — ಅವನು, **ಮುಕ್ತಃಏವ**—ಮುಕ್ತಾತ್ಮನೇ ಆಗಿರುತ್ತಾನೆ.

ನಯನಾಚಾರ್‌ಸ್ವಾಮಿಗಳು ಮೇಲಿನ ಹದಿನಾಲ್ಕು ಪದ್ಯಗಳಿಂದ ಕೂಡಿದ ವೇದಾಂತದೇಶಿಕರ 'ವಿಗ್ರಹಧ್ಯಾನಪದ್ಧತಿಗೆ' ಫಲಶ್ರುತಿಯು

ರೂಪದಲ್ಲಿ ಈ ಶ್ಲೋಕವನ್ನು ರಚಿಸಿದ್ದಾರೆ. ಈ ಮೇಲಿನ ೧೪ ಶ್ಲೋಕಗಳನ್ನು ಪ್ರತಿನಿತ್ಯವೂ ಅರ್ಥಾನುಸಂಧಾನ ಸಹಿತವಾಗಿ ಪಠಿಸುತ್ತಾ ಆಚಾರ್ಯರ ದಿವ್ಯ ಮಂಗಳ ಮೂರ್ತಿಯನ್ನು ಧ್ಯಾನ ಮಾಡುವವನಿಗೆ, ಅವರ ಕೃಪೆಯಿಂದಲೇ, ಪರಮಾತ್ಮನಲ್ಲಿ ಶರಣಾಗತಿ ಮಾಡುವ ಬುದ್ಧಿಯುಂಟಾಗಿ, ಪರಮಾತ್ಮನಲ್ಲಿ ಶರಣಾಗತಿಯನ್ನು ಮಾಡಿ, ದೇಹಾವಸಾನದಲ್ಲಿ ಮುಕ್ತಿಯನ್ನು ಪಡೆಯುವುದೊಂದೇ ಅಲ್ಲದೆ, ಆಚಾರ್ಯರು ತಮ್ಮ ಅವತಾರ ಕಾಲದಲ್ಲಿ ತಿರುಪತಿಯ ಶ್ರೀನಿವಾಸನ ದಯೆಯನ್ನು ಕುರಿತು—'ಎಲೈ ದಯಾದೇವಿಯೇ ! ತಾಯಿ ! ತಿರುಪತಿಯ ಬೆಟ್ಟದಲ್ಲಿ ವಿಶೇಷ ಆದರದಿಂದ ಬಂದು ನಿಂತಿರುವ ಶ್ರೀನಿವಾಸನು, ಮುಕ್ತಾತ್ಮರು ಶ್ರೀವೈಕುಂಠದಲ್ಲಿ ಅವನನ್ನು ಅನುಭವಿಸುವ ಅನುಭವವನ್ನು ನನಗೆ ಇಲ್ಲಿಯೇ, ಈ ಲೀಲಾ ವಿಭೂತಿಯಲ್ಲಿಯೇ ಅನುಗ್ರಹಿಸುವಂತೆಮಾಡು. ನಿನ್ನಲ್ಲಿ ಇದಕ್ಕಿಂತಲೂ ಮಿಗಿಲಾದುದಾವುದನ್ನೂ ನಾನು ಯಾಚಿಸುವುದಿಲ್ಲ.'—"**ನಾತಃಪರಂ ಕಿಮಪಿ ಮೇ ತ್ವಯಿ ನಾಥನೀಯಂ, ಮಾತರ್ದಯೇ ! ಮಯಿಕುರುಷ್ವ ತಥಾ ಪ್ರಸಾದಂ । ಬದ್ಧಾದರೋ ವೃಷಗಿರಿ ಪ್ರಣಯೀ ಯಥಾಸೌ । ಮುಕ್ತಾನುಭೂತಿ ಮಿಹದಾಸ್ಯತಿ ಮೇ ಮುಕುಂದಃ ॥**" (ದಯಾಶತಕ_೧೦೦)_ಎಂದು ಪ್ರಾರ್ಥಿಸಿದಂತೆಯೂ, ಅದಕ್ಕೆ ವಿವರಣೆಯೋ ಎಂಬಂತೆ **ಅ**ದನ್ನೇ ವಿವರವಾಗಿ ವರದರಾಜನಲ್ಲಿ-'ಎಲೈ ! ವರದರಾಜನೇ ! ನೀನು **ಪ್ರ**ಸನ್ನನಾಗಿರುವುದಾದರೇ, ನಾನು ನಿನ್ನ ಸಮೀಪದಲ್ಲಿಯೇ ಇದ್ದು, ನಿನ್ನಲ್ಲಿ ನನಗೆ ಯಾವ ಒಂದು ವ್ಯಾಜವೂ ಇಲ್ಲದ ಶುದ್ಧವಾದ ಭಕ್ತಿಯಿದ್ದು, ನಿನ್ನ ದಾಸರೊಡನೆಯೇ ಸದಾ ಸಂಸರ್ಗವೇರ್ಪಡುವುದಾದರೆ, ಎಲೈ ! ಪರಮಾತ್ಮನೇ ! ಈ ಸಂಸಾರವೇ ಮೋಕ್ಷದೆಶೆಗೆ ಸರಿಸಮಾನವಲ್ಲವೇ'—'**ತ್ವಂ ಚೇತ್ಪ್ರಸೀದಸಿ, ತವಾಸ್ಮಿ ಸಮೀಪತಶ್ಚೇತ್ । ತ್ವಯ್ಯಸ್ತಿ ಭಕ್ತಿರನಘಾ ಕರಿಶೈಲನಾಥ ! ಸಂಸೃಜ್ಯತೇ ಯದಿ ಚ ದಾಸಜನಸ್ತ್ವದೀಯಃ । ಸಂಸಾರ ಏಷ ಭವನ್ನಪವರ್ಗ ಏವ**'—(ವರದರಾಜ ಪಂಚಾಶತ್-೪೨) –ಎಂದೂ, ಮತ್ತೆ ಆ ತರಹದ ಸ್ಥಿತಿಯನ್ನು ಪರಮಾತ್ಮನು ಅನುಗ್ರಹಿಸಿದ ಬಳಿಕ, ಆಚಾರ್ಯರು ಅದೇ ವರದರಾಜನನ್ನು ಕುರಿತು-'ಎಲೈ ! ವರದ-

ರಾಜನೆ ! ಇದೇ ರೀತಿ ನಿರಂತರವಾಗಿ ಬೇರೆ ಯಾವ ವಿಷಯದಲ್ಲಿಯೂ ಗಮನವಿಲ್ಲದೆ, ಸಾಮಾನ್ಯ ಮನುಷ್ಯರಿಂದ ಚಿಂತಿಸಲೂ ಸಾಧ್ಯವಿಲ್ಲದಿರುವ, ನಿನ್ನ ಸುಂದರಮೂರ್ತಿಯನ್ನು ನಾನು ಸಾಕ್ಷಾತ್ಕರಿಸುವಲ್ಲಿ, ಸತ್ಯವಾಗಿ ಪ್ರಮಾಣಮಾಡಿ ಹೇಳುತ್ತೇನೆ—ವೈಕುಂಠದಲ್ಲಿ ವಾಸಮಾಡುವ ವಿಷಯದಲ್ಲಿಯೂ ನನಗೆ ಅಭಿಲಾಷೆಯಿಲ್ಲ'–'**ನಿರಂತರಂ ನಿರ್ವಿಶಯಸ್ತ್ವದೀಯಮಸ್ಪಷ್ಟ ಚಿಂತಾಪದಮಾಭಿರೂಪ್ಯಂ । ಸತ್ಯಂ ಶಪೇ ವಾರಣಶೈಲನಾಥ । ವೈಕುಂಠವಾಸೇऽಪಿ ನ ಮೇऽಭಿಲಾಷಃ ॥ (ವರದರಾಜಪಂಚಾಶತ್–೪೯)**'–ಎಂದು ಅನುಭವಿಸಿದಂತೆ, ನಾವು ಈ ದೇಹವಿರುವಲ್ಲಿಯೇ ಪರಮಾತ್ಮನ ದಿವ್ಯಮಂಗಳಮೂರ್ತಿಯ ಸಾಕ್ಷಾತ್ಕಾರ ಪಡೆದು, ಅವನ ದಾಸರ ಸಂಸರ್ಗವನ್ನೂ ಹೊಂದಿ, ತುಚ್ಛವಾದ ಐಹಿಕ ವಿಷಯಗಳಲ್ಲಿ ಆಸಕ್ತಿ ಬಾರದೆ, ಪರಮಾತ್ಮನ ಗುಣಾನುಭವ ಮಾಡುವ ಸ್ಥಿತಿಯನ್ನು ಪಡೆಯುತ್ತೇವೆ–ಎಂಬುದನ್ನೇ 'ಮುಕ್ತ ಏವಸಃ'—ಎಂಬ ಪದಗಳಿಂದ ಇಲ್ಲಿ ಹೇಳಿದ್ದಾರೆ.

—ಇಲ್ಲಿಗೆ 'ವೇದಾಂತದೇಶಿಕ ವಿಗ್ರಹಧ್ಯಾನಪದ್ಧತಿ'ಯು
ಮುಕ್ತಾಯವಾಯಿತು.



## ಶ್ರೀನಯನಾರಾಚಾರ್ಯಸ್ವಾಮಿ ವಿರಚಿತಂ

## ಶ್ರೀಮದ್ವೇದಾಂತದೇಶಿಕ ತನಿಯನ್ (ಬಿಡಿಪದ್ಯ)

**ಶ್ರೀಮಾನ್‌ವೆಂಕಟನಾಥಾರ್ಯಃ ಕವಿತಾರ್ಕಿಕಕೇಸರೀ ।**
**ವೇದಾನ್ತಾಚಾರ್ಯವರ್ಯೋಮೇ ಸನ್ನಿಧತ್ತಾಂಸದಾ ಹೃದಿ ॥**

**ಶ್ರೀಮಾನ್** — ಪರಮಾತ್ಮನ ನಿತ್ಯಕೈಂಕರ್ಯಶ್ರೀಸಂಪನ್ನರಾದ, **ಕವಿತಾರ್ಕಿಕಕೇಸರಿ**— ಕವಿಗಳು ಮತ್ತು ತಾರ್ಕಿಕರ ಮಧ್ಯದಲ್ಲಿ ಸಿಂಹದಂತಿದ್ದು, 'ಕವಿತಾರ್ಕಿಕಸಿಂಹ'ರೆಂದು ಬಿರುದಾಂಕಿತರಾದ, **ವೇದಾಂತಾಚಾರ್ಯವರ್ಯಃ**—ವೇದಾಂತಚಾರ್ಯರುಗಳಲ್ಲಿ ಶ್ರೇಷ್ಠರಾದ, **ವೇಂಕಟನಾಥಾರ್ಯಃ**—ಶ್ರೀವೆಂಕಟನಾಥಾರ್ಯರು, **ಮೇ**—ನನ್ನ, **ಹೃದಿ**—ಹೃದಯದಲ್ಲಿ, **ಸದಾ**—ಎಲ್ಲ ಕಾಲದಲ್ಲಿಯೂ, **ಸನ್ನಿಧತ್ತಾಂ**—ಪೂರ್ಣವಾದ ಸಾನ್ನಿಧ್ಯದಿಂದಿರಲಿ.

ಶ್ರೀಮದಾಚಾರ್ಯರ ದಿವ್ಯಮಂಗಳ ವಿಗ್ರಹವನ್ನು ಈ ಹಿಂದೆ ಬಂದ ೧ಳ ಪದ್ಯಗಳಿಂದ ಧ್ಯಾನಿಸಿ, ಅವರು ನಮ್ಮ ಹೃದಯಕಮಲದಲ್ಲಿ ನಿರಂತರವಾಗಿ ಪರಿಪೂರ್ಣಸಾನ್ನಿಧ್ಯದಿಂದ ಬಿಜಯಮಾಡಿಸಿರಬೇಕೆಂದು ಪ್ರಾರ್ಥಿಸಿ, ಆಹ್ವಾನಿಸುವ ಸಾನ್ನಿಧ್ಯಯಾಚನಾಮಂತ್ರಸ್ವರೂಪವಾದುದು ಈ ಶ್ಲೋಕ.

**'ಆಚಾರ್ಯವಾನ್ ಪುರುಷೋವೇದ'**, **'ಆಚಾರ್ಯಾದೇವ ಹಿಸಾಧಿಷ್ಠಂ ಭವತಿ'**,–ಇತ್ಯಾದಿ ಶ್ರುತಿ ಪ್ರಮಾಣಗಳಿಂದ, **'ಆಚಾರ್ಯರನ್ನರಿತು, ಅವರ ಕೃಪೆಗೆ ಪಾತ್ರರಾದವರು ಮಾತ್ರವೇ, ಪರಮಾತ್ಮನನ್ನರಿಯಬಲ್ಲರು' 'ಅವರು ಮಾಡುವ ಸರ್ವಕರ್ಮಗಳೂ ಪೂರ್ಣಫಲವನ್ನೀಯುತ್ತನೆ.'** — ಎಂದು ತಿಳಿದುಬರುವುದರಿಂದ, ನಾವು ಮಾಡುವ ಸರ್ವವಿಧವಾದ ಕೆಲಸಗಳೂ ಪೂರ್ಣಫಲವನ್ನೀಯಲು, ಮತ್ತು ಆ ಕರ್ಮಗಳಿಂದ ಭಗವಂತನ ಮುಖೋಲ್ಲಾಸ ಸಿದ್ಧಿಸಲೆಂದೂ, ನಮ್ಮ ಸಂಪ್ರದಾಯ

ದಲ್ಲಿ ಎಲ್ಲ ಕೆಲಸಗಳ ಆದಿಯಲ್ಲಿಯೂ, ಈ ಮೇಲಿನ ಆಚಾರ್ಯರ ತನಿಯನ್ ಹೇಳುವ ಸಂಪ್ರದಾಯವು ಬೆಳೆದು ಬಂದಿದೆ.

ಈ ರೀತಿ ಮೇಲಿನ ಶ್ಲೋಕದಿಂದ ಆಚಾರ್ಯರನ್ನು ಹೃದಯದೇಗುಲ-ದಲ್ಲಿ ಆಹ್ವಾನಿಸಿ, ಸ್ಥಾಪನೆಮಾಡಿ ಕೊಂಡ ಬಳಿಕ, ಮಾನಸಿಕವಾಗಿ ಅವರಿಗೆ ಧೂಪ ದೀಪಾದಿ ವಸ್ತ್ರಾಭರಣಗಳೆಲ್ಲವನ್ನೂ ಸಮರ್ಪಿಸಿ, ಅವರ ಕಲ್ಯಾಣ-ಗುಣಗಳನ್ನು ತಿಳಿಸುವ ಈ ಕೆಳಕಂಡ ಅಷ್ಟೋತ್ತರ ಶತನಾಮಾವಳಿಯನ್ನು ಹೇಳುತ್ತಾ, ಅವರ ಕಲ್ಯಾಣಗುಣಗಳನ್ನನುಸಂಧಾನಮಾಡುತ್ತಾ, ಅವರ ಅಡಿದಾವರೆಯಲ್ಲಿ ನಮ್ಮ ಭಕ್ತಿ ಕುಸುಮವನ್ನರ್ಪಿಸುತ್ತಾ, ಈ ಜೀವ ತಮಗೆ ಸೇರಿದವನು, ಸ್ವತಂತ್ರನಲ್ಲ, 'ಆಚಾರ್ಯಾಧೀನ'—ಎಂಬ ಅರ್ಥವನ್ನೀಯುವ (ಮಃನ), 'ನಮಃ'—ಎಂಬ ಪದವನ್ನೂ, ಆಚಾರ್ಯರ ಒಂದೊಂದು ನಾಮೋಚ್ಚಾರಣದ ಕೊನೆಯಲ್ಲಿಯೂ ಅರ್ಥಾನುಸಂಧಾನ ಸಹಿತವಾಗಿ ಹೇಳಿ, ಆಚಾರ್ಯರಲ್ಲಿ ನಮ್ಮ ರಕ್ಷಾಭರವನ್ನು ಅರ್ಪಣೆಮಾಡಬೇಕು.

## ಶ್ರೀಮದ್ವೇದಾಂತ ದೇಶಿಕಾಷ್ಟೋತ್ತರ-ಶತನಾಮಾವಳಿಃ ||

೧. ಓಂ ಶ್ರೀ ಘಂಟಾವತಾರಾಯ ನಮಃ
೨. ಓಂ ಅನಂತಾರ್ಯತನಯಾಯ ನಮಃ
೩. ಓಂ ವೇಂಕಟಾಧಿಪಾಯ ನಮಃ
೪. ಓಂ ಶ್ರೀರಂಗರಾಜದೌಹಿತ್ರಾಯ ನಮಃ
೫. ಓಂ ದ್ವಾದಶಾಬ್ದಾಂತೆ ಗರ್ಭಗಾಯ ನಮಃ
೬. ಓಂ ವಿಭವಾಬ್ದ ಸಮುತ್ಪನ್ನಾಯ ನಮಃ
೭. ಓಂ ಕನ್ಯಾಶ್ರವಣಸಂಭವಾಯ ನಮಃ
೮. ಓಂ ಶ್ರೀಮಲ್ಲಕ್ಷ್ಮಣಯೋಗ್ಯಂಶಾಯ ನಮಃ
೯. ಓಂ ವರದಾಚಾರ್ಯವೀಕ್ಷಿತಾಯ ನಮಃ

೧೦. ಓಂ ರಾಮಾನುಜಾರ್ಯಸಂದೃಷ್ಟಾಯ ನಮಃ ೧೦

೧೧. ಓಂ ಸೌಪರ್ಣಮನುಚಿಂತಕಾಯ ನಮಃ

೧೨. ಓಂ ತಾರ್ಕ್ಷ್ಯದತ್ತವರಾಯ ನಮಃ

೧೩. ಓಂ ಶುದ್ಧಾಯ ನಮಃ

೧೪. ಓಂ ಪ್ರಸಾದಿತ ಹಯಾನನಾಯ ನಮಃ

೧೫. ಓಂ ಅಧೀತಸಾಂಗಸಕಲಶ್ರುತಯೇ ನಮಃ

೧೬. ಓಂ ಸ್ಮೃತಿವಿದಗ್ರಣ್ಯೈ ನಮಃ

೧೭. ಓಂ ಇತಿಹಾಸಪುರಾಣಜ್ಞಾಯ ನಮಃ

೧೮. ಓಂ ಸುಕವಯೇ ನಮಃ

೧೯. ಓಂ ತರ್ಕತತ್ವವಿದೇ ನಮಃ

೨೦. ಓಂ ಭಾಷ್ಯಕಾರಾಯ ನಮಃ ೨೦

೨೧. ಓಂ ಭಯಹರಾಯ ನಮಃ

೨೨. ಓಂ ಸುಧಾಶಿನೇ ನಮಃ

೨೩. ಓಂ ದುಗ್ಧರಾಶಿಕೃತೇ ನಮಃ

೨೪. ಓಂ ಪ್ರಧಾನಪ್ರತಿತಂತ್ರಜ್ಞಾಯ ನಮಃ

೨೫. ಓಂ ದೇವತಾಪಾರಮಾರ್ಥ್ಯವಿದೇ ನಮಃ

೨೬. ಓಂ ಶ್ರುತವಿದ್ಯಾಯ ನಮಃ

೨೭. ಓಂ ಶ್ರಾವಯಿತ್ರೇ ನಮಃ

೨೮. ಓಂ ಶ್ರುತಪಾಲಾಯ ನಮಃ

೨೯. ಓಂ ಶ್ರುತಪ್ರದಾಯ ನಮಃ

೩೦. ಓಂ ಶ್ರುತಾಯ ನಮಃ ೩೦

೩೧. ಓಂ ಪಾಂಡಿತ್ಯದಾತ್ರೇ ನಮಃ

೩೨. ಓಂ ಕೃತಕೃತ್ಯಾಯ ನಮಃ

೩೩. ಓಂ ಕೃತಿನೇ ನಮಃ

೩೪. ಓಂ ಸುಧಿಯೇ ನಮಃ

೩೫. ಓಂ ನಿರಸ್ತಸಾಂಖ್ಯಾಯ ನಮಃ

೩೬. ಓಂ ಪ್ರತ್ಯುಕ್ತಯೋಗಾಯ ನಮಃ
೩೭. ಓಂ ಕಾಣಾದಭಂಜನಾಯ ನಮಃ
೩೮. ಓಂ ಅಚಿಚ್ಚೈತನ್ಯವಾದಘ್ನಾಯ ನಮಃ
೩೯. ಓಂ ಕ್ಷಣಿಕಾಣುಮತಾರ್ದನಾಯ ನಮಃ
೪೦. ಓಂ ಸಾಕಾರಧೀನಿರಾಕರ್ತ್ರೇ ನಮಃ ೪೦
೪೧. ಓಂ ಶೂನ್ಯವಾದತಮೋರವಯೇ ನಮಃ
೪೨. ಓಂ ಕುದೃಷ್ಟ್ಯುರಗಪಕ್ಷೀಶಾಯ ನಮಃ
೪೩. ಓಂ ಸಪ್ತಭಂಗೀವಿಲೋಪನಾಯ ನಮಃ
೪೪. ಓಂ ಭೇದಾಭೇದಮತಚ್ಛೇತ್ರೇ ನಮಃ
೪೫. ಓಂ ಧೂರ್ತಯಾದವಕಲ್ಪನಾಯ ನಮಃ
೪೬. ಓಂ ಅನೀಶವಾದದಂಭೋಳಯೇ ನಮಃ
೪೭. ಓಂ ಪಾಷಂಡಮತಖಂಡನಾಯ ನಮಃ
೪೮. ಓಂ ಸಂರಕ್ಷಿತಾಗಮಾಯ ನಮಃ
೪೯. ಓಂ ಶಂಖಚಕ್ರಧಾರಣರಕ್ಷಿತ್ರೇ ನಮಃ
೫೦. ಓಂ ಊರ್ಧ್ವಪುಂಡ್ರಾಂಕನತ್ರಾತ್ರೇ ನಮಃ ೫೦
೫೧. ಓಂ ಶುದ್ಧಸತ್ವಮಯಾಕೃತಯೇ ನಮಃ
೫೨. ಓಂ ಯತ್ಯಾಚಾರಪ್ರತಿಷ್ಠಾತ್ರೇ ನಮಃ
೫೩. ಓಂ ಸರ್ವತಂತ್ರಸ್ವತಂತ್ರಧಿಯೇ ನಮಃ
೫೪. ಓಂ ಅವತಾರರಹಸ್ಯಜ್ಞಾಯ ನಮಃ
೫೫. ಓಂ ಅರ್ಚಾಸೌಂದರ್ಯಸಕ್ತಧಿಯೇ ನಮಃ
೫೬. ಓಂ ಅರ್ಥಪಂಚಕತತ್ವಜ್ಞಾಯ ನಮಃ
೫೭. ಓಂ ತತ್ವತ್ರಯವಿಶೇಷವಿದೇ ನಮಃ
೫೮. ಓಂ ಭಕ್ತಿಯೋಗವಿರೋಧಿಘ್ನಾಯ ನಮಃ
೫೯. ಓಂ ಭಕ್ತಿಮತೇ ನಮಃ
೬೦. ಓಂ ಭಗವತ್ಪ್ರಿಯಾಯ ನಮಃ ೬೦
೬೧. ಓಂ ಜ್ಞಾನೈಕಸಾರಾಯ ನಮಃ

೬೨. ಓಂ ದ್ವಯವಿದೇ ನಮಃ
೬೩. ಓಂ ವಿಭಕ್ತಾಧಿಕೃತಿತ್ರಯಾಯ ನಮಃ
೬೪. ಓಂ ಚತುಶ್ಲೋಕ್ಯರ್ಥಸಾರಜ್ಞಾಯ ನಮಃ
೬೫. ಓಂ ಸಮ್ಯಗ್ಜ್ಞಾತಾಂಗಪಂಚಕಾಯ ನಮಃ
೬೬. ಓಂ ಷಡಂಗಯೋಗನಿರ್ಣೇತ್ರೇ ನಮಃ
೬೭. ಓಂ ಸಪ್ತತಂತುಕೃದುತ್ತಮಾಯ ನಮಃ
೬೮. ಓಂ ಅಷ್ಟಾಕ್ಷರೈಕನಿರತಾಯ ನಮಃ
೬೯. ಓಂ ನವನ್ಯೈಕರಸಾಶ್ರಯಾಯ ನಮಃ
೭೦. ಓಂ ದಶತಾತ್ಪರ್ಯವಿಜ್ಞಾತ್ರೇ ನಮಃ ೭೦
೭೧. ಓಂ ಶತಕೃತೇ ನಮಃ
೭೨. ಓಂ ಸಹಸ್ರವಿದೇ ನಮಃ
೭೩. ಓಂ ಸ್ಥೂಲಲಕ್ಷ್ಯಾಯ ನಮಃ
೭೪. ಓಂ ಅನೇಕನಾನಾಕೋಟಿಜ್ಞಾನನಿವರ್ತಕಾಯ ನಮಃ
೭೫. ಓಂ ಧರ್ಮಶಂಕವೇ ನಮಃ
೭೬. ಓಂ ಸಾಧುಬೃಂದವಂದಿತಾಂಘ್ರಿಸರೋರುಹಾಯ ನಮಃ
೭೭. ಓಂ ಪದ್ಮಾಕ್ಷನಂದಜನಕಾಯ ನಮಃ
೭೮. ಓಂ ಪರಾವರವಿಭಾಗವಿದೇ ನಮಃ
೭೯. ಓಂ ತ್ಯಾಗಶಬ್ದಾರ್ಥವಿದೇ ನಮಃ
೮೦. ಓಂ ಧರ್ಮವೇದಿನೇ ನಮಃ ೮೦
೮೧. ಓಂ ವಿಧಿವಿಶೇಷವಿದೇ ನಮಃ
೮೨. ಓಂ ಉತ್ತಮಶ್ಲೋಕ ಭಾವಜ್ಞಾಯ ನಮಃ
೮೩. ಓಂ ಪಂಚಕಾಲಪರಾಯಣಾಯ ನಮಃ
೮೪. ಓಂ ಸುರಸೇವ್ಯಾಯ ನಮಃ
೮೫. ಓಂ ಪೂರ್ಣಮನಸೇ ನಮಃ
೮೬. ಓಂ ಸೂರೀಂದ್ರ ಪ್ರತಿರೂಪಕಾಯ ನಮಃ
೮೭. ಓಂ ಕವಿತಾರ್ಕಿಕ ಪಂಚಾಸ್ಯಾಯ ನಮಃ

೮೮. ಓಂ ನಿಗಮಾಂತದೇಶಿಕಾಯ ನಮಃ

೮೯. ಓಂ ವೈದ್ಯಾಯ ನಮಃ

೯೦. ಓಂ ಮುನೀಂದ್ರಾಯ ನಮಃ ೯೦

೯೧. ಓಂ ಸರ್ವಜ್ಞಾಯ ನಮಃ

೯೨. ಓಂ ಉಪಕರ್ತ್ರೇ ನಮಃ

೯೩. ಓಂ ಉಪಕಾರವಿದೇ ನಮಃ

೯೪. ಓಂ ಸತ್ಸಂಪ್ರದಾಯ ಸ್ಥಿರಧಿಯೇ ನಮಃ

೯೫. ಓಂ ಅನಘಾಯ ನಮಃ

೯೬. ಓಂ ಸತ್ಯವಾಚೇ ನಮಃ

೯೭. ಓಂ ಶುಚಯೇ ನಮಃ

೯೮. ಓಂ ಸಾಧುವೃತ್ತಯೇ ನಮಃ

೯೯. ಓಂ ಮುಕ್ತಡಂಭಾಯ ನಮಃ

೧೦೦. ಓಂ ಜಿತಾಕ್ಷಾಯ ನಮಃ

೧೦೧. ಓಂ ದೀರ್ಘಬಂಧುಮತೇ ನಮಃ

೧೦೨. ಓಂ ದಯಾಳವೇ ನಮಃ

೧೦೩. ಓಂ ಶಾಸಿತ್ರೇ ನಮಃ

೧೦೪. ಓಂ ಸರ್ವಹಿತಾಚರಣತತ್ಪರಾಯ ನಮಃ

೧೦೫. ಓಂ ಮಹಾಗುರುವೇ ನಮಃ

೧೦೬. ಓಂ ಸ್ವರ್ಣವರ್ಣಾಯ ನಮಃ

೧೦೭. ಓ ಸುಬಾಹವೇ ನಮಃ

೧೦೮. ಓಂ ಪುಂಡರೀಕದೃಶೇ ನಮಃ

॥ ಶ್ರೀಮದ್ವೇದಾಂತದೇಶಿಕಾಷ್ಟೋತ್ತರಶತನಾಮಾವಳಿಃ ಸಮಾಪ್ತಾ ॥

[ಮೇಲೆ ಹೇಳಿದ ೧೦೮ ನಾಮಾವಳಿಯಿಂದ ಆಚಾರ್ಯರಲ್ಲಿ ಭಕ್ತಿ ಕುಸುಮವನ್ನರ್ಪಿಸಿದ ಬಳಿಕ ಆಚಾರ್ಯರಿಗೆ ಮಂಗಳಾರತಿ ಮಾಡುತ್ತಾ ಮಂಗಳವನ್ನು ಹಾಡಬೇಕು. ಈ ಮಂಗಳವನ್ನು ಹಾಡುವ ಕ್ರಮವನ್ನು 'ವೇದಾಂತ ದೇಶಿಕ ಮಂಗಳಾಶಸನ'ದಲ್ಲಿ ಆಚಾರ್ಯರ ಸುಪುತ್ರರಾದ ಶ್ರೀಮಾನ್ ವರದಾಚಾರ್ಯರು ತಿಳಿಸಿದ್ದಾರೆ]

|| ವೇದಾಂತದೇಶಿಕ ಮಂಗಳಾಶಾಸನಮ್ ||

**ಸರ್ವತಂತ್ರಸ್ವತಂತ್ರಾಯ ಸಿಂಹಾಯ ಕವಿವಾದಿನಾಮ್ |**
**ವೇದಾಂತಾಚಾರ್ಯವರ್ಯಾಯ ವೇಂಕಟೇಶಾಯ ಮಂಗಳಮ್ || ೧ ||**

**ಸರ್ವತಂತ್ರ ಸ್ವಂತಂತ್ರಾಯ** = ಎಲ್ಲ ತಂತ್ರಗಳಲ್ಲಿಯೂ ಸ್ವತಂತ್ರರಾದ **ಕವಿವಾದಿನಾಮ್** = ಕವಿಗಳಿಗೂ ತತ್ವವಿಷಯಗಳಲ್ಲಿ ವಾದ ಮಾಡುವವರಿಗೂ, **ಸಿಂಹಾಯ** = ಸಿಂಹದಂತಿರುವ, **ವೇದಾಂತಾಚಾರ್ಯವರ್ಯಾಯ** = ವೇದಾಂತಾಚಾರ್ಯರುಗಳಲ್ಲಿ ಶ್ರೇಷ್ಠರಾದ, **ವೇಂಕಟೇಶಾಯ** = ವೇಂಕಟನಾಥರಿಗೆ, **ಮಂಗಳಮ್** = ಮಂಗಳವುಂಟಾಗಲಿ.

ಆಚಾರ್ಯರುಗಳಿಗೆ ಮತ್ತು ಪರಮಾತ್ಮನಿಗೆ ಮಂಗಳವನ್ನು ಹಾಡು- ವಾಗ, ಪ್ರಧಾನವಾಗಿ ಎರಡು ರೀತಿಯಲ್ಲಿ ಮಂಗಳವನ್ನು ಹಾಡುತ್ತಾರೆ. ಮೊದಲನೆಯದು—ತಂದೆ ತಾಯಿಯರು ತಮ್ಮ ಮಕ್ಕಳ ಸೌಂದರ್ಯವನ್ನು ಬಹಳ ಕಾಲ ದಿಟ್ಟಿಸಿ ನೋಡಿ ಹಿರಿಹಿಗ್ಗಿ, ಬಳಿಕ, ತಮ್ಮ ಕಣ್ಣಿನ ದೃಷ್ಟಿಯೇ ಮಕ್ಕಳಿಗೆ ತಗುಲಿ, ಎಲ್ಲಿ ತಮ್ಮ ಮಕ್ಕಳಿಗೆ ತೊಂದರೆಯಾಗುತ್ತದೆಯೋ ಎಂದು ಅಭಿಮಾನ ಮತ್ತು ವಾತ್ಸಲ್ಯಾತಿರೇಕದಿಂದ ಭಾವಾವೇಶಕ್ಕೆ ಒಳ- ಗಾಗಿ, ಮಗುವಿಗೆ ದೃಷ್ಟಿ ಇಡುವುದು, ನೀರಾಜನವೆತ್ತುವುದು-ಮೊದಲಾದು ವನ್ನು ಮಾಡುತ್ತಾ ಮಕ್ಕಳಿಗೆ ಮಂಗಳವನ್ನು ಹರುಸುವಂತೆಯೇ, ನಾವು ಹಿಂದೆ ವರ್ಣಿಸಿರುವಂತೆ ಆಚಾರ್ಯರ ದಿವ್ಯ ಮಂಗಳಮೂರ್ತಿಯನ್ನು ಧ್ಯಾನ- ಮಾಡಿ, ಸಾಕ್ಷಾತ್ಕರಿಸಿ, ಆ ಮಂಗಳಮೂರ್ತಿಯ ದಿವ್ಯ ಸೌಂದರ್ಯದಲ್ಲಿ ಮುಳುಗಿ, ಆನಂದತುಂದಿಲರಾಗಿ, ಅವರಲ್ಲಿರುವ ಭಕ್ತ್ಯತಿಶಯದಿಂದ ಭಾವಾ- ವೇಶಕ್ಕೆ ಒಳಗಾಗಿ, ಅವರ ಸುಂದರ ಮೂರ್ತಿಗೆ ಯಾವ ಅವದ್ಯವೂ ಬಾರ-

ದಿರಲೆಂದು, ಅವರ ಮೂರ್ತಿಗೆ ಕರ್ಪೂರ ನಿರಾಜನವನ್ನು ಮಾಡಿ ಮಂಗಳ–ವನ್ನು ಹರಸುತ್ತೇವೆ.

ಆಚಾರ್ಯರ ವಿಗ್ರಹವನ್ನು ಧ್ಯಾನಿಸಿ, ಸಾಕ್ಷಾತ್ಕರಿಸಿದ ಬಳಿಕವೂ, ಕೆಲವು ವೇಳೆ ನಮ್ಮ ಮನಸ್ಸು ಇತರ ವಿಷಯಗಳಲ್ಲಿ ಪ್ರಾವಣ್ಯವನ್ನು ಪಡೆದರೆ, ನಮ್ಮಿಂದ ಸಾಕ್ಷಾತ್ಕೃತವಾದ ಆಚಾರ್ಯರ ಮೂರ್ತಿಯು ಮರೆ–ಯಾಗುತ್ತದೆ. ಆ ರೀತಿಯಾಗಿ ನಮ್ಮ ಮನಸ್ಸು ಇತರ ವಿಷಯಗಳ ಪ್ರಾವಣ್ಯಕ್ಕೆ ಒಳಗಾಗದೇ, ಸದಾ ಆಚಾರ್ಯರ ದಿವ್ಯಮಂಗಳ ಮೂರ್ತಿ ಸ್ಫುಟವಾಗಿ ನಮ್ಮ ಹೃದಯದೇಗುಲದಲ್ಲಿ ನೆಲೆನಿಲ್ಲಲೆಂದೂ, ಮತ್ತು ದೀಪದ ಬೆಳಕು ಕಗ್ಗತ್ತಲನ್ನು ದೂರ ಮಾಡುವಂತೆ ನಮ್ಮ ಐಹಿಕ ವಿಷಯಾಸಕ್ತತೆ ಎಂಬ ಕಗ್ಗತ್ತಲನ್ನು ಹೋಗಲಾಡಿಸುವ ಜ್ಞಾನ ದೀಪದಿಂದ ಕರ್ಪೂರ ನೀರಾಜನವನ್ನು ಆಚಾರ್ಯ ಮಂಗಳ ಮೂರ್ತಿಗೆಮಾಡಿ, ಅವರ ದರ್ಶನಕ್ಕೆ ಬರುವ ವಿಘ್ನವನ್ನು ಅವರೇ ನಿವಾರಣೆ ಮಾಡಿ, ಅವರ ದಿವ್ಯ ಮಂಗಳ ಮೂರ್ತಿ ನಿರ್ವಿಘ್ನವಾಗಿ ನಮಗೆ ಸಾಕ್ಷಾತ್ಕರಿಸುವಂತಾಗಲಿ–ಎಂದು ಪ್ರಾರ್ಥಿಸುವುದೇ ಎರಡನೆಯ ಬಗೆಯುದು. ('ಮಂ' ಎಂದರೆ 'ವಿಘ್ನ', 'ಗಲ' ಎಂದರೆ 'ನುಂಗಿ ಹಾಕುವುದು';— 'ವಿಘ್ನವನ್ನು ನಿವಾರಣೆ ಮಾಡುವುದು'–ಎನ್ನುವ ಅರ್ಥದಲ್ಲಿ 'ಮಂಗಳ' ಶಬ್ದವನ್ನು ಪ್ರಯೋಗಿಸುತ್ತಾರೆ.)

[ಈ ಮಂಗಳದಲ್ಲಿ ಪ್ರತಿಪದಾರ್ಥದಿಂದಲೇ ವಿಷಯವು ಸ್ಪಷ್ಟವಾಗು–ವುದರಿಂದ, ಬೇರೆಯಾಗಿ ತಾತ್ಪರ್ಯವು ಬರೆಯಲ್ಪಟ್ಟಿಲ್ಲ]

**ನಭಸ್ಯಮಾಸಿಶ್ರೋಣಾಯಾಂ ಅವತೀರ್ಣಾಯ ಸೂರಯೇ ।**
**ವಿಶ್ವಾಮಿತ್ರಾನ್ವಯಾಯಾಸ್ತು ವೇಂಕಟೇಶಾಯ ಮಂಗಳಮ್ ॥ ೨ ॥**

**ನಭಸ್ಯಮಾಸಿ**— ಭಾದ್ರಪದ ಮಾಸದಲ್ಲಿ, **ಶ್ರೋಣಾಯಾಂ**= ಶ್ರವಣ ನಕ್ಷತ್ರದಿಂದ ಕೂಡಿದ ಶುಭದಿನದಲ್ಲಿ, **ಅವತೀರ್ಣಾಯ**= ಅವತರಸಿದ, **ಸೂರಯೇ**= ನಿತ್ಯಸೂರಿಗಳಾದ,(ಪಂಡಿತರಾದ), **ವಿಶ್ವಮಿತ್ರಾನ್ವಯಾಯ**= ವಿಶ್ವಾಮಿತ್ರರ ಕುಲ ಅಥವಾ ಗೋತ್ರದಲ್ಲಿ ಜನಿಸಿದ, **ವೇಂಕಟೇಶಾಯ**— ವೇಂಕಟನಾಥರಿಗೆ, **ಮಂಗಳಂ ಅಸ್ತು**= ಮಂಗಳವುಂಟಾಗಲಿ.

ಆಚಾರ್ಯರು ಭಾದ್ರಪದಮಾಸದಲ್ಲಿ ಅವತರಿಸಿದರು. ಈ ಪುಸ್ತಕದ ಮುನ್ನುಡಿಯಲ್ಲಿ ವಿವರಿಸಿರುವಂತೆ, ಪರಮಾತ್ಮನ ಸಂಕಲ್ಪಾನುಸಾರ, ಪರಮಾತ್ಮನಂತೆಯೇ, ವೈಕುಂಠಲೋಕದಲ್ಲಿರುವ ನಿತ್ಯ ಸೂರಿಗಳೂ ಧರ್ಮ ಸಂಸ್ಥಾಪನಾರ್ಥವಾಗಿ, ಆಳ್ವಾರಾಚಾರ್ಯರುಗಳ ರೂಪದಲ್ಲಿ ಭೂಲೋಕದಲ್ಲಿ ಅವತರಿಸುತ್ತಾರೆ. ಶ್ರೀಮದ್ವೇದಾಂತ ದೇಶಿಕರೂ, ಪೂರ್ವದಲ್ಲಿ ನಿತ್ಯಸೂರಿಗಳಾಗಿ, ಬಳಿಕ ಆಚಾರ್ಯರೂಪದಲ್ಲಿ ಇಲ್ಲಿ ಅವತರಿಸಿ, ಅವತಾರ ಕೃತ್ಯವನ್ನು ಮುಗಿಸಿ, ಮತ್ತೆ ನಿತ್ಯ ಸೂರಿಗಳಾಗಿಯೇ ಶೋಭಿಸುತ್ತಿದ್ದಾರಾದುದರಿಂದ, ಆಚಾರ್ಯರಿಗೆ 'ಸೂರಿ'-ಎಂಬ ವಿಶೇಷಣವನ್ನು ಈ ಶ್ಲೋಕದಲ್ಲಿ ಪ್ರಯೋಗಿಸಿದ್ದಾರೆ. ಈ ರೀತಿ ನಿತ್ಯಸೂರಿಗಳಾದ ಆಚಾರ್ಯರಾದ ಶ್ರೀಮದ್ವೇಂಕಟನಾಥರು ವಿಶ್ವಾಮಿತ್ರ ಗೋತ್ರದಲ್ಲಿ ಪ್ರಾದುರ್ಭವಿಸಿ ಚೇತನೋದ್ಧಾರ ಮಾಡಿದ್ದಾರೆ. ಅವರಿಗೆ ಮಂಗಳವುಂಟಾಗಲಿ.

**ಪಿತಾ ಯಸ್ಯಾನಂತಸೂರಿಃ ಪುಂಡರೀಕಾಕ್ಷಯಜ್ವನಃ |**
**ಪೌತ್ರೋಯಸ್ತನಯಸ್ತೋತಾರಂಬಾಯಾಸ್ತಸ್ಯ ಮಂಗಳಮ್ || ೨ ||**

**ಯಸ್ಯ** = ಯಾವ ಆಚಾರ್ಯರಿಗೆ. **ಅನಂತಸೂರಿಃ**= 'ಅನಂತ ಸೂರಿ'–ಎಂಬುವರು, **ಪಿತಾ** = ತಂದೆಯಾಗಿದ್ದರೋ, **ಯಃ**= ಯಾವ ಆಚಾರ್ಯರು **ಪುಂಡರೀಕಾಕ್ಷಯಜ್ವನಃ** = 'ಪುಂಡರೀಕಾಕ್ಷಯಜ್ವಾ'—ಎಂಬುವವರ, **ಪೌತ್ರಃ**= ಮೊಮ್ಮಗನೋ, **ಯಃ**= ಯಾರು **ತೋತಾರಂಬಾಯಾಃ**= 'ತೋತಾರಂಬಾ'—ಎಂಬ ತಾಯಿಯ, **ತನಯಃ**= ಮಗನೋ **ತಸ್ಯ**= ಆ ಆಚಾರ್ಯರಿಗೆ, **ಮಂಗಳಮ್**= ಮಂಗಳವುಂಟಾಗಲಿ.

ಆಚಾರ್ಯರ ಅವತಾರ ಕಾಲದಲ್ಲಿ, ಆಚಾರ್ಯರು, ಪುಂಡರೀಕಾಕ್ಷಯಜ್ವಾರವರ ಮೊಮ್ಮಗನಾಗಿಯೂ, ಮತ್ತು ಅನಂತಸೂರಿ ಮತ್ತು ತೋತಾರಂಬಾರವರ ಸುಪುತ್ರರಾಗಿಯೂ ಅವತರಿಸಿದ್ದರು. ಆಚಾರ್ಯರ ಅವತಾರಕಾಲದಲ್ಲಿ ಅವರ ಭೌತಿಕದೇಹಕ್ಕೆ ಇವರ ತಂದೆ ತಾಯಿ ಅಜ್ಜ ಮೊದಲಾದವರೂ ಲೌಕಿಕವಾಗಿ ಕಾರಣರಾದುದರಿಂದಲೂ, ಮತ್ತು ಇಂತಹ ಆಚಾರ್ಯರನ್ನು ಪುತ್ರನನ್ನಾಗಿಯೂ ಮೊಮ್ಮಗನನ್ನಾಗಿಯೂ ಪಡೆಯುವ ಭಾಗ್ಯಶಾಲಿ-

ಗಳಾದುದರಿಂದ, ಅವರನ್ನೂ ಈ ಶ್ಲೋಕದಲ್ಲಿ ಸ್ಮರಣೆಮಾಡಿಕೊಂಡು ಆಚಾರ್ಯರ ದಿವ್ಯ ಮಂಗಳಮೂರ್ತಿಗೆ ಮಂಗಳವನ್ನು ಹಾಡಿದ್ದಾರೆ.

**ವೇಂಕಟೇಶಾವತಾರೋಽಯಂ ತದ್ಘಂಟಾಂಶೋಽಥವಾ ಭವೇತ್ ।**
**ಯತೀಂದ್ರಾಂಶೋಽಥವೇತ್ಯೇವಂ ವಿತರ್ಕ್ಯಾಯಾಸ್ತು ಮಂಗಳಮ್ ॥**

ಅಯಂ = ಈ ವೇಂಕಟನಾಥರು, ವೇಂಕಟೇಶಾವತಾರಃ = ಸಾಕ್ಷಾತ್ ತಿರುಮಲೆಯಲ್ಲಿನ ಶ್ರೀನಿವಾಸನ ಅವತಾರವೋ, ಅಥವಾ = ಇಲ್ಲದಿದ್ದರೆ, ತದ್ಘಂಟಾಂಶಃ = ಆ ಶ್ರೀನಿವಾಸನ (ದೇವಾಲಯದ) ಘಂಟೆಯ ಅವ-ತಾರವೋ, ಅಥವಾ = ಇಲ್ಲದಿದ್ದರೆ, ಯತೀಂದ್ರಾಂಶಃ = ಭಗವದ್ರಾ-ಮಾನುಜಾಚಾರ್ಯರ ಅವತಾರವೋ, ಇತಿ = ಎಂದು, ಏವಂ = ಈರೀತಿಯಾಗಿ ವಿತರ್ಕ್ಯಾಯೈ = ತರ್ಕಿಸಲು (ಊಹಿಸಲು) ಆಶ್ರಯರಾದ (ಕಾರಣಕರ್ತ-ರಾದ) (ನಮ್ಮ ಆಚಾರ್ಯ ದಿವ್ಯ ಮಂಗಳಮೂರ್ತಿಗೆ) ಮಂಗಳಂ = ಮಂಗ-ಳವು, ಅಸ್ತು = ಉಂಟಾಗಲಿ.

ಆಚಾರ್ಯರು ಅವತರಿಸುವ ಮುನ್ನ, ಅವರ ಮಾತಾಪಿತೃಗಳಿಗೆ, ಬಹಳಕಾಲ ಸಂತಾನವಿಲ್ಲದೆ ಅವರು ತಿರುಪತಿಯಲ್ಲಿದ್ದು, ಶ್ರೀನಿವಾಸನಿಗೆ ಕೈಂಕರ್ಯವೆಸಗುತ್ತ. ವಿಶೇಷವಾಗಿ ಸಂತಾನಾರ್ಥವಾಗಿ ಅವನಲ್ಲಿ ಮೊರೆಯಿಡಲು, ಆಚಾರ್ಯರ ತಾಯಿಯಾದ ಶ್ರೀಮತಿ ತೋತಾರಂಬಾರವರಿಗೆ, ಒಂದು ದಿನ ಕನಸಿನಲ್ಲಿ, ತಿರುಪತಿ ಶ್ರೀನಿವಾಸನ ದೇವಸ್ಥಾನದ ಘಂಟೆಯನ್ನು ತಾವು ನುಂಗಿದಂತಾಗಿ, ಅಂದೇ ಗರ್ಭವನ್ನು ಧರಿಸಿದರು. ಮಾರನೆಯ ದಿನದಿಂದ ದೇವಸ್ಥಾನದಲ್ಲಿ ಘಂಟೆಯು ಕಾಣದಂತಾಯಿತು. ಘಂಟೆಯನ್ನು ಬಹಳವಾಗಿ ಹುಡುಕಿದಾಗ, ಆ ಘಂಟೆಯೇ ತೋತಾರಂಬಾ-ರವರ ಗರ್ಭದಲ್ಲಿದ್ದು ಮುಂದೆ ಅವತರಿಸುವುದಾಗಿ ಅಶರೀರವಾಣಿಯಾಯಿತು. ಅಂತೆಯೇ ಕಾಲಕ್ರಮೇಣ ಆಚಾರ್ಯರ ಅವತಾರವಾದುದರಿಂದ, ಆಚಾ-ರ್ಯರ ಅವತಾರವು ಘಂಟಾವತಾರವೆಂದು ಪ್ರಸಿದ್ಧವಾಗಿದೆ.

[ಒಳ್ಳೆಯ ಘಂಟೆಯು ಓಂಕಾರನಾದದಿಂದ ಕೂಡಿರುತ್ತದೆ. 'ಓಂ' ಕಾರವು ಅ, ಉ, ಮತ್ತು ಮ-ಎಂಬ ಮೂರು ಅಕ್ಷರಗಳ ಸಂಯುಕ್ತವಾದುದು. ಅವುಗಳಲ್ಲಿ ಅಕಾರವು—ಪರಮಾತ್ಮನನ್ನೂ, ಉಕಾರವು—ಮಹಾಲಕ್ಷ್ಮಿಯನ್ನೂ, ಮಕಾರವು ಜೀವನನ್ನೂ ಸೂಚಿಸುತ್ತವೆ. ಅಂದರೆ-'ಪರಮಾತ್ಮ ಮತ್ತು ಮಹಾಲಕ್ಷ್ಮಿಗೆ, ಜೀವಾತ್ಮನು ಯಾವಾಗಲೂ ಅಡಿಯಾಳಾಗಿ ದಾಸನಾಗಿದ್ದಾನೆ'-ಎಂಬುದೇ ಓಂಕಾರಾರ್ಥ. ಈ ಅರ್ಥವನ್ನು ಚಿಂತನೆ ಮಾಡುತ್ತಾ, ಪರಮಾತ್ಮನಿಗೆ ಆತ್ಮಹವಿಸ್ಸಮರ್ಪಣೆ ಮಾಡುತ್ತಾ, ಅವನ ಕೈಂಕರ್ಯಮಾಡಲು ಪ್ರಚೋದಿತರಾಗಬೇಕೆಂದೇ, ದೇವರ ಪೂಜೆಯಲ್ಲಿ ಘಂಟಾನಾದಮಾಡುವ ಉದ್ದೇಶ್ಯ. ಘಂಟಾನಾದವು ಪ್ರಣವನಾದವನ್ನು ಪ್ರಕಾಶಪಡಿಸುತ್ತಾ ನಾವು ಸಮಾಧಿಸ್ಥಿತಿಯಲ್ಲಿ ಪರಮಾತ್ಮನಲ್ಲಿ ಕೂಡಿ ಲಯಿಸುವಂತೆ ಮಾಡುತ್ತೆ. ನಮ್ಮ ಆಚಾರ್ಯರು ಅವತರಿಸಿ, ಘಂಟಾನಾದದಂತೆಯೇ ಪ್ರಣವೋಪಾಸನೆಯನ್ನು ಮಾಡುತ್ತಾ, ಘಂಟಾನಾದಕ್ಕಿಂತಲೂ ಮಿಗಿಲಾಗಿ, ಅವರ ಗ್ರಂಥಗಳ ಮುಖಾಂತರ, ಪ್ರಣವಾರ್ಥವನ್ನು ಪ್ರಕಾಶಪಡಿಸುತ್ತಾ, ಸಾರ್ವಕಾಲಿಕವಾಗಿ, ಸರ್ವಜನರೂ ಪರಮಾತ್ಮನನ್ನು ಸೇರುವಂತೆ ಮಾಡಿರುವುದರಿಂದಲೂ, ನಮ್ಮ ಆಚಾರ್ಯರು ಘಂಟಾವತಾರರೆಂದು ಪ್ರಸಿದ್ಧರಾಗಿರುವುದು ಅನ್ವರ್ಥವಾಗಿದೆ]

'ಕಲೌ ವೇಂಕಟನಾಯಕಃ'-ಎಂದು ಹೇಳಲಾಗುವಂತೆ, ವಿಶೇಷವಾಗಿ, ಕಲಿಯುಗದಲ್ಲಿ ತಿರುಪತಿಯ ಬೆಟ್ಟದಮೇಲೆ, ಅರ್ಚಾವತಾರ ರೂಪದಲ್ಲಿ ಪರಮಾತ್ಮನು ಶ್ರೀನಿವಾಸನಾಗಿ ಅವತರಿಸಿ, ತನ್ನ ಭಕ್ತರಿಗೆ ತನ್ನ ಮಂಗಳ-ಮೂರ್ತಿಯ ದರ್ಶನವನ್ನೀಯುವುದರ ಮುಖಾಂತರ ಎಲ್ಲ ಚೇತನರ ಕಣ್ಮನ-ಗಳನ್ನು ತಣಿಸಿ, ಎಲ್ಲರನ್ನೂ ಆಕರ್ಷಿಸಿ, ಅವರ ಪಾಪಗಳನ್ನು ತೊಲಗಿಸಿ, ಅಜ್ಞಾನಾಂಧಕಾರವನ್ನು ಹೋಗಲಾಡಿಸಿ, ಐಹಿಕಾಮುಷ್ಮಿಕವಾದ ಸರ್ವ ಸಂಪತ್ತನ್ನೂ ಅನುಗ್ರಹಿಸಿ, ದೇಹಾವಸಾನದಲ್ಲಿ ಮೋಕ್ಷ ಸಾಮ್ರಾಜ್ಯವನ್ನೇ ಅನುಗ್ರಹಿಸುತ್ತಿದ್ದಾನೆ. ಅಂತೆಯೇ ನಮ್ಮ ಆಚಾರ್ಯರ ಅವತಾರವಾದ ಬಳಿಕವೂ ಭಕ್ತರಿಗೆ ಅವತಾರಕಾಲದಲ್ಲಿನ ಅವರ ದಿವ್ಯ ಮಂಗಳ ಮೂರ್ತಿ-ಯನ್ನು ಸಂದರ್ಶಿಸಿದವರಿಗಾಗಲೀ, ಅಥವಾ ಆಗ ಸಂದರ್ಶಿಸಿ ಅವರನ್ನು

ವರ್ಣಿಸಿರುವಕ್ರಮದಲ್ಲಿ ದೇವಸ್ಥಾನಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವ ಅರ್ಚಾ-ಮೂರ್ತಿಗಳನ್ನು ದರ್ಶನ ಮಾಡುವವರಿಗಾಗಲಿ, ಅವರ ದಿವ್ಯ ಮಂಗಳ-ಮೂರ್ತಿಯನ್ನು ಹೃದಯ ದೇಗುಲದಲ್ಲಿ ಪ್ರತಿಷ್ಠಾಪಿಸಿ ಧ್ಯಾನಮಾಡುವವರಿ-ಗಾಗಲಿ ಆಚಾರ್ಯರು ಪರಮಾತ್ಮನಂತೆಯೇ, ಅವರ ಕಣ್ಮನಗಳನ್ನು ತಣಿಸಿ, ಪಾಪಗಳನ್ನು ತೊಲಗಿಸಿ, ಅಜ್ಞಾನಂಧಕಾರವನ್ನು ಹೋಗಲಾಡಿಸಿ, ಐಹಿಕಾ-ಮುಷ್ಮಿಕವಾದ ಸರ್ವ ಸಂಪತ್ತನ್ನು ಅನುಗ್ರಹಿಸಿ, ದೇಹಾವಸಾನದಲ್ಲಿ ಮೋಕ್ಷಸಾಮ್ರಾಜ್ಯವನ್ನೂ ಅನುಗ್ರಹಿಸುತ್ತಾರೆ.

ವೇದಮಂತ್ರಗಳಿಗೆ ಅನೇಕ ಮತದವರು ಅಪಾರ್ಥಗಳನ್ನು ಕಲ್ಪಿಸಿ, ಅಪಸಿದ್ಧಾಂತಗಳನ್ನು ಸ್ಥಾಪಿಸಿ, ಚೇತನರನ್ನು ದುರ್ಮಾರ್ಗದಲ್ಲಿ ಹೋಗಲು ಪ್ರೇರೇಪಿಸುತ್ತಿರಲು, ಧರ್ಮಕ್ಕೆ ಗ್ಲಾನಿಯೊದಗಿದಾಗ, ಪರಮಾತ್ಮನಿಂದ ಆಜ್ಞಾಪಿಸಲ್ಪಟ್ಟು, ನಿತ್ಯವಿಭೂತಿಯಲ್ಲಿ ಅವನಿಗೆ ಸದಾಕೈಂಕರ್ಯವನ್ನೆ ಸಗು-ತ್ತಿದ್ದ ಸಾಕ್ಷಾತ್ ಆದಿಶೇಷನೇ ಶ್ರೀಮದ್ರಾಮಾನುಜರ ರೂಪದಲ್ಲಿ ಅವತರಿಸಿ-ತಮ್ಮ ಗ್ರಂಥಗಳ ಮುಖಾಂತರ ವೇದಮಂತ್ರಗಳ ಸರಿಯಾದ ಅರ್ಥಗಳನ್ನು ಪ್ರಖ್ಯಾಪನಮಾಡಿ, ಧರ್ಮಸಂಸ್ಥಾಪನೆ ಮಾಡಿ ವೇದಮಾರ್ಗ ಪ್ರತಿಷ್ಠಾಪನೆ ಮಾಡಿ ಚೇತನೋದ್ಧಾರಮಾಡಿದನು. ಅಂತಯೇ ವೇದಾಂತ ದೇಶಿಕರೂ ಅವತರಿಸಿ, ತಮ್ಮ ಗ್ರಂಥಗಳ ಮುಖಾಂತರ, ಅಪಸಿದ್ಧಾಂತಗಳನ್ನು ಖಂಡಿಸಿ, ವೇದ ಮಂತ್ರಗಳ ಸದರ್ಥಗಳನ್ನು ಬೋಧಿಸಿ, ಭಗವದ್ರಾಮಾನುಜರ ದರ್ಶನವನ್ನು ವಿಶೇಷವಾಗಿ ಬೆಳಕಿಗೆ ತಂದು ಚೇತನೋದ್ಧಾರಮಾಡಿದರು. ಆದುದರಿಂದ, ನಮ್ಮ ಆಚಾರ್ಯರು, ಸಾಕ್ಷಾತ್ ಶ್ರೀನಿವಾಸನ ಅವತಾರವೇ ? (ಅಥವಾ ಅವನ ಘಂಟೆಯ ಅವತಾರವೇ ?) ಅಥವಾ ಭಗವದ್ರಾಮಾನುಜರ ಅವತಾರವೇ ?—ಎಂದು ಅನೇಕ ಮಹಾತ್ಮರೂ ತರ್ಕಿಸಲು ಕಾರಣವಾಗು-ವಂತೆ, ಶ್ರೀನಿವಾಸನ, ಅವನ ಘಂಟೆಯು ಮತ್ತು ಭಗವದ್ರಾಮಾನುಜರ-ಎಲ್ಲರ ಗುಣಗಳೂ ಏಕೀಭವಿಸಿ ಮೂರ್ತಿವೆತ್ತಂತ್ತಿರುವ ನಮ್ಮ ಆಚಾರ್ಯರ ದಿವ್ಯ ಮಂಗಳವಿಗ್ರಹಕ್ಕೆ ಮಂಗಳವುಂಟಾಗಲಿ—ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿದ್ದಾರೆ.

ಶ್ರೀಭಾಷ್ಯಕಾರಃ ಪಂಥಾನಂ ಆತ್ಮನಾದರ್ಶಿತಂ ಪುನಃ ।
ಉದ್ಧರ್ತುಮಾಗತೋ ನೂನಂ ಇತ್ಯುಕ್ತ್ಯಾಯಾಸ್ತು ಮಂಗಳಮ್ ॥೫॥

ಶ್ರೀಭಾಷ್ಯಕಾರಃ = ಶ್ರೀಭಾಷ್ಯವನ್ನು ರಚಿಸಿದ ಭಗವದ್ರಾಮಾನುಜರು, ಆತ್ಮನಾ = ತಮ್ಮಿಂದ, ದರ್ಶಿತಂ = ತೋರಲ್ಪಟ್ಟ, ಪಂಥಾನಂ = (ವೇದ) ಮಾರ್ಗವನ್ನು, ಪುನಃ = ಮತ್ತೆ ಉದ್ಧರ್ತುಂ = ಉದ್ಧರಿಸಲೆಂದೇ, ನೂನಂ ನಿಶ್ಚಯವಾಗಿಯೂ, ಆಗತಃ = (ವೇದಾಂತದೇಶಿಕರ ರೂಪದಲ್ಲಿ ಅವತರಿಸಿ) ಬಂದಿದ್ದಾರೆ, ಇತಿ = ಎಂದು ಉಕ್ತ್ಯಾಯ = ಹೇಳಲ್ಪಡುವ ಆಚಾರ್ಯರ ದಿವ್ಯ ಮಂಗಳ ವಿಗ್ರಹಕ್ಕೆ, ಮಂಗಳಮ್ = ಮಂಗಳವು, ಅಸ್ತು = ಉಂಟಾಗಲಿ.

ಭಗವದ್ರಾಮಾನುಜಾಚಾರ್ಯರು ತಮ್ಮ ಅವತಾರ ಕಾಲದಲ್ಲಿ, ಪ್ರಸ್ಥಾನತ್ರಯವೆಂದು ಕರೆಯಲಾಗುವ—ಉಪನಿಷತ್ತುಗಳು, ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳಿಗೆ, ಕ್ರಮವಾಗಿ ವ್ಯಾಖ್ಯಾನ ರೂಪವಾಗಿರುವ ವೇದಾರ್ಥ ಸಂಗ್ರಹ, ಗೀತಾಭಾಷ್ಯ, ಮತ್ತು ವೇದಾಂತಸಾರ, ವೇದಾಂತದೀಪ ಮತ್ತು ಶ್ರೀಭಾಷ್ಯ ಗ್ರಂಥಗಳ ಮುಖಾಂತರ ಅಪಸಿದ್ಧಾಂತಗಳನ್ನು ಖಂಡಿಸಿ ವೇದಮಾರ್ಗ ಪ್ರತಿಷ್ಠಾಪನೆ ಮಾಡಿದರು. ಆದರೆ, ಇವರ ಕಾಲಾನಂತರ ಇವರ ಗ್ರಂಥಗಳ ಮೇಲೆ, ಅನೇಕರು ಅನೇಕ ಆಕ್ಷೇಪಗಳನ್ನು ಮಾಡುತ್ತಿದ್ದರು. ಹಾಗೆಯೇ ಇವರ ಗ್ರಂಥಗಳು ವಿಶೇಷವಾಗಿ ಸಂಸ್ಕೃತಜ್ಞರಿಗೆ ಮಾತ್ರ ಅರಿತುಕೊಳ್ಳಲು ಮೀಸಲಾಗಿದ್ದಿತು. ವೇದಾಂತದೇಶಿಕರು ಅವತರಿಸಿದ ನಂತರ ರಾಮಾನುಜರ ದರ್ಶನದ ಬಗ್ಗೆ ಆಕ್ಷೇಪವನ್ನೆತ್ತಿದ್ದ ಸರ್ವಮತೀಯರಿಗೂ ತಮ್ಮ 'ಶತದೂಷಣಿ' ಮೊದಲಾದ ಗ್ರಂಥಗಳಿಂದ ಉತ್ತರವಿತ್ತು, ಸಂಸ್ಕೃತ, ಮಣಿಪ್ರವಾಳ, ತಮಿಳು ಭಾಷೆಗಳಲ್ಲಿ ಪಾಮರರಿಂದ ಪಂಡಿತರವರೆವಿಗೂ ಸರ್ವವಿಧ ಅಧಿಕಾರಿಗಳಿಗೂ ಬಹಳ ಸುಲಭವಾಗಿ ನಿಸ್ಸಂದೇಹವಾಗಿ ನಿಷ್ಕೃಷ್ಟವಾಗಿ ತಿಳಿಯುವಂತೆ ಭಗವದ್ರಾಮಾನುಜರ ದರ್ಶನವನ್ನು ತಮ್ಮ ಗ್ರಂಥಗಳ ಮುಖಾಂತರ ಪ್ರಕಾಶಪಡಿಸಿ ಸ್ಥಾಪಿಸಿದರು. ಆಚಾರ್ಯರ ಈ ಅವತಾರ ಕೃತ್ಯವನ್ನು ಕಂಡ ಅನೇಕ ಮಹಾತ್ಮರು, ಸಾಕ್ಷಾದ್ರಾಮಾನುಜರೇ

ತಾವು ಮೊದಲು ತೋರಿಕೊಟ್ಟ ವೇದಮಾರ್ಗವನ್ನು ಪುನಃ ಜೀರ್ಣೋದ್ಧಾರ-ಮಾಡಿ ಪ್ರತಿಷ್ಠಾಪಿಸಲೆಂದೇ ವೇದಾಂತದೇಶಿಕರ ಸ್ವರೂಪದಲ್ಲಿ ಮತ್ತೆ ಅವ-ತರಿಸಿದರೆಂದು ಹೇಳುತ್ತಾರೆ. ಈ ರೀತಿ ಹೇಳಲ್ಪಡುವ ನಮ್ಮ ಆಚಾರ್ಯರ ದಿವ್ಯಮಂಗಳ ವಿಗ್ರಹಕ್ಕೆ ಮಂಗಳವುಂಟಾಗಲಿ ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿದ್ದಾರೆ.

**ಯೋ ಬಾಲ್ಯೇ ವರದಾರ್ಯಸ್ಯ ಪ್ರಾಚಾರ್ಯಸ್ಯ ಪರಾಂದಯಾಂ ।**
**ಅವಾಪ ವೃದ್ಧಿಂ ಗಮಿತಃ ತಸ್ಮೈ ಯೋಗ್ಯಾಯ ಮಂಗಳಮ್ ॥೬॥**

**ಯಃ** =ಯಾವ ವೆಂಕಟನಾಥಾಚಾರ್ಯರು, **ಬಾಲ್ಯೇ** =ಚಿಕ್ಕಂದಿ-ನಲ್ಲಿಯೇ **ಪ್ರಾಚಾರ್ಯಸ್ಯ** =ತಮ್ಮ ಗುರುಗಳಿಗೂ ಗುರುಗಳಾದ, **ವರದಾರ್ಯಸ್ಯ**= ವರದಾಚಾರ್ಯರ, **ಪರಾಂದಯಾಂ** =ಅತ್ಯಧಿಕವಾದ-ಕೃಪೆಯನ್ನು, **ಅವಾಪ** =ಹೊಂದಿದರೋ, (ಮತ್ತು) **ವೃದ್ಧಿಂ** =(ಆದರಿಂದ) ಅಭಿವೃದ್ಧಿಯನ್ನೂ **ಗಮಿತಃ**= ಹೊಂದಿದರೋ, **ತಸ್ಮೈ**= ಆ, **ಯೋಗ್ಯಾಯ** =ಯೋಗ್ಯರಾದ ಆ ವೇದಾಂತಚಾರ್ಯರಿಗೆ, **ಮಂಗಳಂ-(ಅಸ್ತು)**= ಮಂಗಳವುಂಟಾಗಲಿ.

ವೇಂಕಟನಾಥರ ಪ್ರತಿಭೆಯೂ, ಬುದ್ಧಿ ಕೌಶಲವೂ ಚಿಕ್ಕವಯಸ್ಸಿ-ನಿಂದಲೂ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುತ್ತಿದ್ದವು. ಯಾವ ವಿಷಯವನ್ನಾಗಲಿ ಅವರಿಗೆ ಒಂದುಸಲಕ್ಕಿಂತ ಹೆಚ್ಚಾಗಿ ಹೇಳಬೇಕಾಗಿರಲಿಲ್ಲ. ಅವರಿಗೆ ಐದು ವರುಷ ವಯಸ್ಸಾಗಿದ್ದಾಗ ಒಂದು ದಿನ, ಅವರ ಸೋದರ-ಮಾವನವರಾದ ಆತ್ರೇಯ ರಾಮಾನುಜರು, ಅವರನ್ನು, ತಮ್ಮ ಗುರುಗಳಾದ ನಡಾದೂರು ಅಮ್ಮಾಳ್ ಎಂದು ಕರೆಯಲ್ಪಡುವ ವರದಾಚಾರ್ಯಸ್ವಾಮಿಗಳ ದರ್ಶನಕ್ಕೆ ಕರೆದುಕೊಂಡುಹೋದರು. ಆ ಸಮಯದಲ್ಲಿ ವರದಾಚಾರ್ಯರು ತಮ್ಮ ಶಿಷ್ಯರುಗಳಾದ ಶ್ರುತಪ್ರಕಾಶಿಕಾಚಾರ್ಯರಾದ ಸುದರ್ಶನಸೂರಿಗಳೂ, ವಡಕ್ಕು ತಿರುವೀದಿಪಿಳ್ಳೈ ಮೊದಲಾದವರಿಗೆ ಶ್ರೀಭಾಷ್ಯಕಾಲಕ್ಷೇಪವನ್ನು ಹೇಳುತ್ತಿದ್ದರು. ಆತ್ರೇಯ ರಾಮಾನುಜರು ಪ್ರವೇಶಿಸಿದ ತತ್‌ಕ್ಷಣವೇ, ವರದಾಚಾರ್ಯರು, ಅವರೊಡನಿದ್ದ ಬಾಲಕನ ತೇಜಸ್ಸನ್ನೂ ಲಕ್ಷಣಗಳನ್ನೂ

ನೋಡಿ ಆಶ್ಚರ್ಯಪಟ್ಟು ಆತನ ವಿಷಯವಾಗಿ ಪ್ರಶ್ನೆಮಾಡಿ ಅವನು ಯಾರೆಂಬುದನ್ನು ತಿಳಿದುಕೊಂಡು, ತಾವು ಹಿಂದೆ ನಿಲ್ಲಿಸಿದ್ದ ಉಪನ್ಯಾಸವನ್ನು ಮುಂದುವರಿಸಲು ಹೊರಟರು. ಆದರೆ, ಹಿಂದೆ ಎಲ್ಲಿ ನಿಲ್ಲಿಸಿದ್ದರೆಂಬ ವಿಷ-ಯವು ಎಲ್ಲರಿಗೂ ಮರೆತು ಹೋಗಿದ್ದಿತು. ಆ ಸಮಯದಲಿ ಅಲ್ಲಿದ್ದ ಬಾಲಕರಾದ ವೇಂಕಟನಾಥರು, ಯಾವ ವಿಷಯವನ್ನು ಆಚಾರ್ಯರು ಚರ್ಚಿಸುತ್ತಾ ಕಾಲಕ್ಷೇಪ ಹೇಳುತ್ತಿದ್ದರೆಂಬುದನ್ನು ವರದಾಚಾರ್ಯಸ್ವಾಮಿಗೆ ತಿಳಿಸಿದಾಗ, ಅಲ್ಲಿದ್ದ ಎಲ್ಲರಿಗೂ ಅವರ ಬುದ್ಧಿ ಸಾಮರ್ಥ್ಯವನ್ನು ನೋಡಿ ಆಶ್ಚರ್ಯವುಂಟಾಯಿತು. ಆಗ ಗುರುಗಳಾದ ವರದಾಚಾರ್ಯರು ಬಹಳ ಸಂತೋಷದಿಂದ—"ವೇದಾಂತಮತವನ್ನು ದೃಢವಾಗಿ ಸ್ಥಾಪಿಸಿ, ಅದಕ್ಕೆ ವಿರೋಧವಾದ ಮತಗಳನ್ನು ಖಂಡಿಸಿ, ಸಾಂಗವಾಗಿ ವೇದಾಧ್ಯಯನಮಾಡಿ ವೇದಾರ್ಥಗಳನ್ನರಿತ ವಿದ್ವಾಂಸರುಗಳಿಂದಲೂ ಗೌರವಕ್ಕೆ ಪಾತ್ರನಾಗಿ, ನೀನು ಬಹಳವಾದ ಮಂಗಳಗಳಿಗೆ ಪಾತ್ರನಾಗುವೆ"—"**ಪ್ರತಿಷ್ಠಾಪಿತಃ ವೇದಾಂತಃ ಪ್ರತಿಕ್ಷಿಪ್ತ ಬಹಿರ್ಮತಃ । ಭೂಯಾಸ್ತ್ರೈವಿದ್ಯಮಾನ್ಯಃ ತ್ವಂ ಭೂರಿ-ಕಲ್ಯಾಣ ಭಾಜನಮ್**"—ಎಂದು ಆಶೀರ್ವಾದ ಮಾಡಿದರು. ಅಲ್ಲದೆ ಬಹಳ ವೃದ್ಧರಾದುದರಿಂದ ಸಕಲಶಾಸ್ತ್ರಗಳನ್ನೂ ಇವರಿಗೆ ತಾವೇ ಪಾಠ ಹೇಳಲಾಗ-ದುದಕ್ಕೆ ದುಃಖಪಟ್ಟು, ತಮ್ಮ ಶಿಷ್ಯರೂ ವೇಂಕಟನಾಥರ ಸೋದರ-ಮಾವಂದಿರೂ ಆದ ಆತ್ರೇಯ ರಾಮಾನುಜಾಚಾರ್ಯರಿಗೆ ಆ ಭಾರವನ್ನು ವಹಿಸಿದರು. ಆತ್ರೇಯ ರಾಮಾನುಜರು ವರದಾಚಾರ್ಯರ ಅಪ್ಪಣೆಯಂತೆ ತಮ್ಮ ಸೋದರಳಿಯನಿಗೆ ಸಕಲ ಶಾಸ್ತ್ರಾಭ್ಯಾಸಮಾಡಿಸಿ ಮುಂದೆ ಅವರು ವಹಿಸಬೇಕಾದ ಆಚಾರ್ಯಪೀಠಕ್ಕೆ ಯೋಗ್ಯರನ್ನಾಗಿ ಮಾಡಿದರು. ಈ ರೀತಿ ಯಾಗಿ ತಮ್ಮ ಗುರುಗಳಿಗೂ ಗುರುಗಳಾದ ವರದಾಚಾರ್ಯರ ಅತ್ಯಧಿಕವಾದ ಕೃಪೆಗೆ ಬಾಲ್ಯದಲ್ಲಿಯೇ ಪಾತ್ರರಾಗಿ, ಮತ್ತೆ ಅವರ ಆಜ್ಞಾನುಸಾರವಾಗಿ ತಮ್ಮ ವಿದ್ಯೆಯನ್ನೂ ಅಭಿವೃದ್ಧಿಪಡಿಸಿಕೊಂಡು ಯೋಗ್ಯರಾದ ವೇಂಕಟನಾಥ-ರಿಗೆ ಮಂಗಳವುಂಟಾಗಲೆಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿದ್ದಾರೆ.

**ರಾಮಾನುಜಾರ್ಯಾದಾತ್ರೇಯಾನ್ಮಾತುಲಾತ್ಸಕಲಾಃ ಕಲಾಃ ।**
**ಅವಾಪ ವಿಂಶತ್ಯಬ್ದೀಯಃ ತಸ್ಮೈ ಪ್ರಾಜ್ಞಾಯ ಮಂಗಳಮ್ ॥೭॥**

**ಮಾತುಲಾತ್**= ಸೋದರಮಾವನವರಾದ, **ಆತ್ರೇಯಾತ್** = ಆತ್ರೇಯ ಗೋತ್ರದವರಾದ, ರಾಮಾನುಜಾತ್ =ರಾಮಾನುಜಾಚಾರ್ಯ-ರಿಂದ, ವಿಂಶತ್ಯಬ್ದೇ= ತನ್ನ ಇಪ್ಪತ್ತು ವಯಸ್ಸಿನೊಳಗೆ, ಯಃ =ಯಾವ-ವೇಂಕಟನಾಥರು, ಸಕಲಾಃಕಲಾಃ =೬೪ ಕಲೆಗಳನ್ನೂ (ಮತ್ತು ಸಕಲ-ಶಾಸ್ತ್ರಗಳನ್ನೂ) ಅವಾಪ =ಹೊಂದಿದರೊ (ಅಧ್ಯಯನ ಮಾಡಿದರೋ), **ಪ್ರಾಜ್ಞಾಯ**= ಬುದ್ಧಿವಂತರಾದ, **ತಸ್ಮೈ** =ಆ ವೇಂಕಟನಾಥರಿಗೆ, **ಮಂಗಳಮ್** (ಅಸ್ತು) =ಮಂಗಳವುಂಟಾಗಲಿ.

ಹಿಂದಿನ ಶ್ಲೋಕದ ವಿವರಣೆಯಲ್ಲಿಯೇ ತಿಳಿಸಿರುವಂತೆ, ವೇಂಕಟ-ನಾಥರು, ಚಿಕ್ಕಂದಿನಿಂದಲೇ ಬಹಳ ಬುದ್ಧಿವಂತರಾಗಿದ್ದು ಕೇವಲ ೨೦ನೆಯ ವಯಸ್ಸಿನೊಳಗಾಗಿಯೇ, ತಮ್ಮ ಸೋದರಮಾವನವರಾದ ಆತ್ರೇಯ-ರಾಮಾನುಜರಿಂದ ಸಕಲವಿಧವಾದ ೬೪ ಕಲೆಗಳನ್ನೂ, ಸಕಲಶಾಸ್ತ್ರಗಳನ್ನೂ ಅಧ್ಯಯನ ಮಾಡಿದರು. ಈರೀತಿಯಾಗಿದ್ದ ನಮ್ಮ ಆಚಾರ್ಯರಿಗೆ ಮಂಗಳ-ವುಂಟಾಗಲಿ ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿದ್ದಾರೆ.

**ಶ್ರುತಪ್ರಕಾಶಿಕಾ ಭೂಮೌ ಯೇನಾದೌ ಪರಿರಕ್ಷಿತಾ ।**
**ಪ್ರವರ್ತಿತಾ ಚ ಪಾತ್ರೇಷು ತಸ್ಮೈ ಶ್ರೇಷ್ಠಾಯ ಮಂಗಳಮ್ ॥೮॥**

**ಭೂಮೌ** =ಭೂಲೋಕದಲ್ಲಿ, **ಆದೌ** =ಮೊಟ್ಟಮೊದಲು, **ಯೇನ** = ಯಾವ ಆಚಾರ್ಯರಿಂದ, **ಶ್ರುತಪ್ರಕಾಶಿಕಾ**= 'ಶ್ರುತಪ್ರಕಾಶಿಕಾ' ಎಂಬ ಶ್ರೀಭಾಷ್ಯವ್ಯಾಖ್ಯಾನವು, **ಪರಿರಕ್ಷಿತಾ**= ಯಾವ ಅವದ್ಯವೂ ಬಾರದಂತೆ ರಕ್ಷಿಸಲ್ಪಟ್ಟಿತೋ, (**ಚ** =ಮತ್ತು), **ಪಾತ್ರೇಷು**= ಸತ್ಪಾತ್ರರಾದ ಶಿಷ್ಯರಲ್ಲಿ, **ಆದೌ** =ಮೊದಲು, **ಪ್ರವರ್ತಿತಾ** =ಪ್ರಕಾಶಪಡುವಂತೆ ಉಪದೇಶಿಸಲ್ಪ-ಟ್ಟಿತೋ, **ತಸ್ಮೈ** = ಆ **ಶ್ರೇಷ್ಠಾಯ** = ಶ್ರೇಷ್ಠರಾದ ಆಚಾರ್ಯರಿಗೆ, **ಮಂಗಳಂ** -- (ಅಸ್ತು) ಮಂಗಳವುಂಟಾಗಲಿ.

ಹಿಂದೊಮ್ಮೆ ವೇಂಕಟನಾಥರು, ಕರ್ನಾಟಕದ ತಿರುನಾರಾಯಣಪುರಂ, ಸತ್ಯಾಗಾಲಂ—ಇತ್ಯಾದಿ ಕ್ಷೇತ್ರಗಳಲ್ಲಿದ್ದು ಶ್ರೀರಂಗಕ್ಕೆ ಹಿಂತಿರುಗುತ್ತಿದ್ದರು.

ಆ ಸನ್ನಿವೇಶದಲ್ಲಿ, ಮಹಮ್ಮದೀಯರು ಶ್ರೀರಂಗವನ್ನು ದಾಳಿ ಮಾಡುವಸಲು-ವಾಗಿ ಬರುತ್ತಿರಲು, ಈ ವಿಷಯವನ್ನು ದೇವಸ್ಥಾನದ ಮುಖ್ಯಾಧಿಕಾರಿಯಾದ ಶ್ರೀರಂಗರಾಜನಾಥವಾಧೂಲದೇಶಿಕರೆಂಬುವರು ತಿಳಿದು ಬಹಳ ಉಪಾಯದಿಂದ ರಂಗನಾಥದೇವರ ಉತ್ಸವ ವಿಗ್ರಹವನ್ನು, ಶ್ರೀಭೂದೇವಿಯರನ್ನೂ ದೇವ-ಸ್ಥಾನದ ಆಭರಣಗಳನ್ನೂ ಪಲ್ಲಕ್ಕಿಯಲ್ಲಿಟ್ಟು ಕೆಲ ಬ್ರಾಹ್ಮಣರ ಜೊತೆಯಲ್ಲಿ ಗುಪ್ತವಾಗಿ ಶ್ರೀರಂಗದಿಂದ ಹೊರಕ್ಕೆ ಕಳುಹಿಸಿ, ಗರ್ಭಗೃಹದ ಸುತ್ತಲೂ ಕಲ್ಲುರಾಶಿಗಳನ್ನೂ ಹಾಕಿಸಿ ಹೊರಗಡೆ ಕೃತ್ರಿಮ ವಿಗ್ರಹಗಳನ್ನಿಟ್ಟರು. ಸ್ವಲ್ಪ-ಹೊತ್ತಿನಲ್ಲಿಯೇ ಮಹಮ್ಮದೀಯರು ಕಾವೇರಿ ನದಿಯನ್ನು ದಾಟಿಬಂದು ಶ್ರೀರಂಗವನ್ನು ರಕ್ಷಿಸಲು ಸಿದ್ಧರಾಗಿ ನಿಂತಿದ್ದ ೧೨ ಸಾವಿರ ಜನರನ್ನು ಎದುರಿಸಿ, ಅನೇಕರನ್ನೂ ಕೊಲೆಮಾಡಿ ದೇವಸ್ಥಾನವನ್ನು ಸೂರೆಗೊಂಡು, ಅದರಿಂದ ಲಭ್ಯವಾದ ಅಪಾರವಾದ ಐಶ್ವರ್ಯದಿಂದ ಕಣ್ಣನೂರು ಕೋಟೆ-ಯನ್ನು ಕಟ್ಟಿಸಿದರು. ಆ ಸಮಯದಲ್ಲಿ ವೇದಾಂತಾಚಾರ್ಯರೂ ದೇವರ ವಿಗ್ರಹದ ಜೊತೆಯಲ್ಲಿಯೇ ಹೋಗಬೇಕೆಂದಿದ್ದರು. ಆದರೆ ಅಲ್ಲಿದ್ದವರು, ಸುಪ್ರಸಿದ್ಧ ಪಂಡಿತರಾದ ಸುದರ್ಶನ ಭಟ್ಟರ 'ಶ್ರುತಪ್ರಕಾಶಿಕಾ'— ಎಂಬ ಭಗವದ್ರಾಮಾನುಜರ ಶ್ರೀಭಾಷ್ಯಗ್ರಂಥದ ವ್ಯಾಖ್ಯಾನಗ್ರಂಥವನ್ನೂ ಮತ್ತು ಸುದರ್ಶನಾಚಾರ್ಯರ ಮಕ್ಕಳುಗಳಾದ ವೇದಾಚಾರ್ಯ ಮತ್ತು ಪರಾಂಕುಶ-ಭಟ್ಟರೆಂಬಿಬ್ಬರನ್ನೂ ರಕ್ಷಿಸುವ ಕೆಲಸವನ್ನು ವೇದಾಂತಾಚಾರ್ಯರಿಗೆ ವಹಿಸಿ-ದರು. ಆಚಾರ್ಯರು ಅದಕ್ಕೆ ಒಪ್ಪಿ ಆ ತಾಳಪತ್ರದ ಗ್ರಂಥವನ್ನು ಕಾವೇರಿಯ ಮರಳಿನಲ್ಲಿ ಹೂತಿಟ್ಟು ಮಹಮ್ಮದೀಯರ ಸೈನ್ಯವು ಶ್ರೀರಂಗ-ವನ್ನು ಬಿಟ್ಟು ಹೋಗುವವರೆಗೆ ತಾವೂ ಆ ಇಬ್ಬರು ಮಕ್ಕಳೂ ರಾಶಿಯಾಗಿ ಬಿದ್ದಿದ್ದ ಶವಗಳ ಮಧ್ಯದಲ್ಲಿ ಅವಿತುಕೊಂಡು, ನಂತರ ಸತ್ಯಮಂಗಲಕ್ಕೆ ಸುರಕ್ಷಿತವಾಗಿ ಹೋಗಿ ಸೇರಿದರು. ಸುದರ್ಶನಾಚಾರ್ಯರೂ ಮತ್ತು ಅಳ-ಹಿಯ ಮಣವಾಳನಾಯನಾರರೂ ಮಹಮ್ಮದೀಯರಿಂದ ಕೊಲ್ಲಲ್ಪಟ್ಟರು. ಶ್ರೀರಂಗವು ಜನರಹಿತವಾದ ಹಾಳುಕೊಂಪೆಯಾಯಿತು. ಅಂತಹ ಸನ್ನಿ-ವೇಶದಲ್ಲಿ ಆಚಾರ್ಯರು ಮೊದಲು ಶ್ರುತಪ್ರಕಾಶಿಕೆಯನ್ನು ರಕ್ಷಿಸಿದುದೊಂದೇ ಅಲ್ಲದೆ, ಆಗ ಅಳಿದುಳಿದ ಸತ್ಪಾತ್ರರಾದ ಶ್ರೀವೈಷ್ಣವರಿಗೆ ಶ್ರುತಪ್ರಕಾಶಿಕಾ ಸಮೇತವಾಗಿ ಶ್ರೀಭಾಷ್ಯಕಾಲಕ್ಷೇಪವನ್ನು ಹೇಳಿ ಸತ್ಸಂಪ್ರದಾಯವನ್ನು

ಸ್ಥಾಪಿಸಿದರು. ಇಂತಹ ಶ್ರೇಷ್ಠ ಆಚಾರ್ಯರಿಗೆ ಮಂಗಳವುಟಾಗಲಿ– ಎಂದು ಈ ಶ್ಲೋಕದಲ್ಲಿ ಪ್ರಾರ್ಥಿಸಿದ್ದಾರೆ.

ಸಾಂಸ್ಕೃತೀಭಿರ್ದ್ರಾಮಿಡೀಭಿಃ ಬಹ್ವೀಭಿಃ ಕೃತಿಭಿಃ ಜನಾನ್ ।
ಯಃಸಮುಜ್ಜೀವಯಾಮಾಸ ತಸ್ಮೈ ಸೇವ್ಯಾಯಮಂಗಳಮ್ ॥೯॥

ಸಾಂಸ್ಕೃತೀಭಿಃ = ಸಂಸ್ಕೃತಭಾಷೆಯಲ್ಲಿ ರಚಿಸಲ್ಪಟ್ಟಿರುವ, **ದ್ರಾಮಿಡೀಭಿಃ** = ತಮಿಳುಭಾಷೆಯಲ್ಲಿ ರಚಿಸಲ್ಪಟ್ಟಿರುವ, **ಬಹ್ವೀಭಿಃ** = ಅನೇಕವಿಧವಾದ, **ಕೃತಿಭಿಃ** = ತಮ್ಮ ಕೃತಿಗಳಿಂದ, **ಯಃ** = ಯಾರು, **ಜನಾನ್** = ಜನಗಳನ್ನು, **ಸಮುಜ್ಜೀವಯಾಮಾಸ** = ಸರಿಯಾದ ಮಾರ್ಗದಲ್ಲಿ ಉಜ್ಜೀವಿಸುವಂತೆ ಮಾಡಿದರೋ, **ಸೇವ್ಯಾಯ** = ಎಲ್ಲರಿಂದಲೂ ಸೇವಿಸಲು ಯೋಗ್ಯರಾದ, **ತಸ್ಮೈ** = ಆ ವೇದಾಂತಚಾರ್ಯರಿಗೆ, **ಮಂಗಳಂ (ಅಸ್ತು)** = ಮಂಗಳವುಂಟಾಗಲಿ.

ಶ್ರೀಮದ್ವೇಂಕಟನಾಥರು, ಅನೇಕ ದುರ್ಮತಗಳ ಪ್ರಚಾರ ಪ್ರಭಾವದಿಂದ ಸರಿಯಾದ ವೇದವಿಹಿತಮಾರ್ಗವನ್ನರಿಯದೆ ಜನಗಳೆಲ್ಲರೂ, ಅಧೋಗತಿಗಿಳಿಯುವ ಸನ್ನಿವೇಶ ಒದಗಿದ್ದಾಗ, ಪ್ರೌಢವಾಗಿರುವ ಸರಳವಾಗಿರುವ ಪಂಡಿತಪಾಮರರೆಲ್ಲರಿಗೂ ಸುಬೋಧವಾಗಿರುವ ರೀತಿಯಲ್ಲಿ ಸಂಸ್ಕೃತಭಾಷೆಯಲ್ಲಿ ಮತ್ತು ತಮಿಳುಭಾಷೆಯಲ್ಲಿ, 'ತತ್ವಮುಕ್ತಾಕಲಾಪ', 'ತತ್ವಟೀಕೆ', 'ತತ್ವನವನೀತಮ್', 'ಮೀಮಾಂಸಾಪಾದುಕಾ', 'ಸೇಶ್ವರಮೀಮಾಂಸಾ', 'ರಹಸ್ಯನವನೀತಂ', 'ರಹಸ್ಯತ್ರಯಸಾರ', 'ಅಭಯಪ್ರದಾನಸಾರ', ಮೊದಲಾದ ಅನೇಕ ಗ್ರಂಥಗಳನ್ನು ನಿರ್ಮಾಣಮಾಡಿ, ವೇದಪ್ರತಿಪಾದ್ಯವಾದ ತತ್ವವನ್ನು 'ಇದಮಿತ್ಥಂ'—ಎಂದು ಎಲ್ಲರ ಮನಸಿನಲ್ಲಿಯೂ ನೆಲೆನಿಲ್ಲುವಂತೆಮಾಡಿ ಎಲ್ಲ ಜನರಿಗೂ ಸನ್ಮಾರ್ಗವನ್ನುತೋರಿ, ಎಲ್ಲರನ್ನೂ ಉಜ್ಜೀವನಗೊಳಿಸಿದರು. ಈ ಕೆಲಸವನ್ನು ತಮ್ಮ ಅವತಾರ ಕಾಲದಲ್ಲಿ, ಅವರ ಸಮಕಾಲೀನರಾದವರಲ್ಲಿ ಮಾತ್ರ ಮಾಡದೆ, ಅವರಿಂದ ಇತ್ತೀಚೆಗೆ ಹುಟ್ಟಿದ, ಹುಟ್ಟಿರುವ, ಹುಟ್ಟುವ ಸರ್ವಚೇತನರೂ ಉಜ್ಜೀವಿಸಲೆಂದು ತಮ್ಮ ಕೃತಿ-

ರತ್ನಗಳನ್ನೂ ನಮಗೆ ಪರಂಪರಾಗತವಾಗಿ ತಲಪುವಂತೆ ಕೊಟ್ಟುಹೋಗಿ-ದ್ದಾರೆ. ಆದುದರಿಂದ ಎಲ್ಲ ಚೇತನವರ್ಗದವರಿಂದಲೂ ಅವರು, ಸೇವಿಸಲು ಅರ್ಹರಾಗಿದ್ದಾರೆ. ಆ ರೀತಿಯಾದ ಆಚಾರ್ಯರಿಗೆ ಮಂಗಳವುಂಟಾಗಲಿ.

**ಯಃ ಖ್ಯಾತಿಲಾಭಪೂಜಾಸು ವಿಮುಖೋ ವೈಷ್ಣವೀಜನೇ ।**
**ಕ್ರಯಣೀಯದಶಾಂಪ್ರಾಪ್ತಸ್ತಸ್ಮೈ ಭವ್ಯಾಯ ಮಂಗಳಂ ॥೧೦॥**

**ವೈಷ್ಣವೀಜನೇ** = ವಿಷ್ಣು ಭಕ್ತರಲ್ಲಿ, **ಯಃ** = ಯಾರು, **ಖ್ಯಾತಿಲಾಭ-ಪೂಜಾಸು** = ಹೊಗಳಿಕೆ, ಅರ್ಥಿಕಲಾಭ ಮತ್ತು ಗೌರವಗಳಲ್ಲಿ, **ವಿಮುಖಃ** = ಆಸೆಯಿಲ್ಲದವನಾಗಿ, **ಕ್ರಯಣೀಯದಶಾಂ** = (ಅವರಿಗೋಸ್ಕರ ತನ್ನನ್ನೇ)-ಮಾರಾಟ ಮಾಡಿಕೊಳ್ಳುವ ಸ್ಥಿತಿಯನ್ನೂ, **ಪ್ರಾಪ್ತಃ** = ಹೊಂದಿದ್ದಾರೆಯೋ, **ಭವ್ಯಾಯ** = ಮಂಗಳ ಸ್ವರೂಪರಾದ, **ತಸ್ಮೈ** = ಆ ಆಚಾರ್ಯರಿಗೆ, **ಮಂಗಳಂ** (**ಅಸ್ತು**) = ಮಂಗಳವುಂಟಾಗಲಿ.

ನಮ್ಮ ಆಚಾರ್ಯರು ಭಾಗವತಕೈಂಕರ್ಯವಲ್ಲಿಯೇ ಸದಾ ನಿರತ-ರಾಗಿದ್ದರು. ಅವರಿಂದ ಹೊಗಳಿಕೆ, ಅರ್ಥಿಕಲಾಭ ಅಥವಾ ಗೌರವಗಳನ್ನು ಎದುರು ನೋಡಿ ಕೈಂಕರ್ಯವನ್ನೆಸಗುತ್ತಿರಲಿಲ್ಲ. ಅವರ ಭಾಗವತ ಪರಾ-ಕಾಷ್ಠೆ ಎಷ್ಟುಮಟ್ಟಿಗಿದ್ದಿತೆಂದರೆ, ಭಾಗವತರು ಒಂದುವೇಳೆ ತನ್ನನ್ನೇ-ಮಾರಾಟಮಾಡಿ ಯಾವುದಾದರೂ ಕೆಲಸವನ್ನು ಮಾಡಬೇಕೆಂದರೆ, ಅವಕ್ಕೂ ಸಿದ್ಧರಾಗಿ, ಅವರಿಗೋಸ್ಕರ ತನ್ನನ್ನೇ ಮಾರಾಟಮಾಡಿಕೊಳ್ಳುವ ಸ್ಥಿತಿಯಲ್ಲಿ-ದ್ದರು. ಈರೀತಿಯಿರುವ ಆಚಾರ್ಯರು ಅಹಂಕಾರ-ಮಮಕಾರಾದಿಗಳನ್ನು ತೊರೆದವರಾಗಿ ಆತ್ಮಗುಣಪರಿಪೂರ್ಣರಾಗಿ ಮಂಗಳಸ್ವರೂಪರಾಗಿದ್ದರು. ಆರೀತಿಯಾಗಿದ್ದ ಆಚಾರ್ಯರಿಗೆ ಮಂಗಳವುಂಟಾಗಲಿ.

**ಯಸ್ಮಾದೇವಮಯಾ ಸರ್ವಂ ಶಾಸ್ತ್ರಮಗ್ರಾಹಿ ನಾನ್ಯತಃ ।**
**ತಸ್ಮೈ ವೇಂಕಟನಾಥಾಯ ಮಮ ನಾಥಾಯ ಮಂಗಳಮ್ ॥೧೧॥**

**ನಾನ್ಯತಃ** = ಬೇರೆ ಯಾರಿಂದಲೂ ಇಲ್ಲದೆ, **ಯಸ್ಮಾದೇವ** = ಯಾವ ಆಚಾರ್ಯರೊಬ್ಬರಿಂದಲೇ, **ಮಯಾ** = ನನ್ನಿಂದ, **ಸರ್ವಂಶಾಸ್ತ್ರಂ** = ಎಲ್ಲ

ಶಾಸ್ತ್ರಗಳೂ, ಅಗ್ರಾಹಿ= (ಅಧ್ಯಯನಮಾಡಿ) ಗ್ರಹಿಸಲ್ಪಟ್ಟಿತೋ, ಮಮ = ನನಗೆ, ನಾಥಾಯ= ರಕ್ಷಕರಾಗಿ ಒಡೆಯರಾದ, ತಸ್ಮೈ =ಆ (ಆಚಾರ್ಯ-ರಾದ), ವೇಂಕಟನಾಥಾಯ =ವೇಂಕಟನಾಥರಿಗೆ, ಮಂಗಳಂ =ಮಂಗಳ-ವುಂಟಾಗಲಿ.

ಕುಮಾರವರದಾಚಾರ್ಯರು ಸರ್ವಶಾಸ್ತ್ರಗಳನ್ನೂ ತಮ್ಮ ತಂದೆಯೊಬ್ಬರಲ್ಲಿಯೇ ಪೂರ್ಣವಾಗಿ ಅಧ್ಯಯನಮಾಡಿ ಸರ್ವಶಾಸ್ತ್ರಪಾರಂಗತ-ರಾಗಿದ್ದರು. ಭೌತಿಕದೇಹಕ್ಕೆ ಕಾರಣರಾದ ಮಾತಾಪಿತೃಗಳು ಹೇಗೆ ವಂದ್ಯಾರ್ಹರೋ, ಹಾಗೆಯೇ ಆತ್ಮೋಜ್ಜೀವನಕ್ಕೆ ಕಾರಣರಾಗಿ ಮಂತ್ರ ಮಂತ್ರಾರ್ಥಗಳನ್ನು ಬೋಧಿಸಿ ಶಿಷ್ಯನನ್ನು ಅಜ್ಞಾನಾಂಧಕಾರದಿಂದ ಬಿಡಿ-ಸುವ ಗುರುವಾದರೋ ಆತ್ಮನಿಗೆ ತಂದೆಯಂತಿದ್ದು ಇನ್ನೂ ಅಧಿಕವಾಗಿ ವಂದ್ಯಾರ್ಹರಾಗಿರುತ್ತಾರೆ. "ಮಂತ್ರೋ ಮಾತಾ ಗುರುಃಪಿತಾ |". ಆದುದರಿಂದಲೇ ಕುಮಾರವರದಾಚಾರ್ಯರಿಗೆ ಜನ್ಮದಾತಾ, ಮತ್ತು ಗುರುವಾಗಿ ಸರ್ವವಿಧದಲ್ಲಿ ಅವರಿಗೆ ಪೋಷಣೆಯನ್ನು ಕೊಟ್ಟುರಕ್ಷಿಸಿದ ವೇಂಕಟನಾಥರಿಗೆ, ಅವರು ಈ ಶ್ಲೋಕದಲ್ಲಿ ಮಂಗಳ ಹಾಡಿದ್ದಾರೆ.

ಪಿತ್ರೇ ಬ್ರಹ್ಮೋಪದೇಷ್ಟ್ರೇ ಮೇ ಗುರವೇ ದೈವತಾಯ ಚ |
ಪ್ರಾಪ್ಯಾಯ ಪ್ರಾಪಕಾಯಾಸ್ತು ವೇಂಕಟೇಶಾಯಮಂಗಳಮ್ ||೧೨||

ಮೇ =ನನಗೆ, ಪಿತ್ರೇ = ತಂದೆಯಾಗಿಯೂ, ಬ್ರಹ್ಮೋಪದೇಷ್ಟ್ರೇ= ಬ್ರಹ್ಮೋಪದೇಶಮಾಡಿದವರಾಗಿಯೂ, ಗುರವೇ= (ಜ್ಞಾನೋಪದೇಶಮಾಡಿ) ಗುರುಗಳಾಗಿಯೂ, ದೈವತಾಯ =ಉಪಾಸನಾಯೋಗ್ಯರಾಗಿ ದೇವರಾ-ಗಿಯೂ, ಪ್ರಾಪ್ಯಾಯ = ಹೊಂದಲು ಯೋಗ್ಯರಾದ, ಪ್ರಾಪಕಾಯ= ಪರಮಾರ್ಥವನ್ನೂ ಹೊಂದಲು ಸಾಧನರಾಗಿಯೂ ಇರುವ, ವೇಂಕಟೇ-ಶಾಯ= ಸಾಕ್ಷಾತ್ ವೇಂಕಟೇಶನ ಸ್ವರೂಪರಾಗಿಯೂ ಇರುವ ವೇಂಕಟ-ನಾಥರಿಗೆ, ಮಂಗಳಂ= ಮಂಗಳವುಂಟಾಗಲಿ,

ಕುಮಾರವರದಾಚಾರ್ಯರಿಗೆ ವೇದಾಂತದೇಶಿಕರು ಕೇವಲ ಜನ್ಮವಿತ್ತ ತಂದೆ ಮಾತ್ರವಲ್ಲ. ಬ್ರಹ್ಮೋಪದೇಶವನ್ನುಮಾಡಿ, ವೇದಾಧ್ಯಯನಮಾಡಿಸಿ, ದ್ವಿಜತ್ವವನ್ನೂ, ಬ್ರಾಹ್ಮಣ್ಯವನ್ನೂ ಉಂಟುಮಾಡಿದ ಆಚಾರ್ಯರು. ವೇದಾರ್ಥವನ್ನು ಉಪದೇಶಿಸಿ ಅಂತರಿಕವಾದ ಅಂಧಕಾರವನ್ನು ಹೋಗಲಾಡಿಸಿದುದರಿಂದ ಗುರುಗಳಾಗಿದ್ದರು. ಇದೇ ಪುಸ್ತಕದ ೧೨ ನೆಯ ಪುಟದಲ್ಲಿ ಹೇಳಿರುವಂತೆ ಉಪಾಸಿಸಲು ಅರ್ಹರಾದ ಗುಣಪರಿಪೂರ್ಣರಾಗಿ ದೇವತಾ ಸ್ವರೂಪದಲ್ಲಿದ್ದರು. 'ಆಚಾರ್ಯವಾನ್ ಪುರುಷೋ ವೇದ'—ಎಂದು ಹೇಳುವಂತೆ, ಪರಮಾತ್ಮನನ್ನರಿಯಲು ಅವರ ಉಪಾಸನೆಯು ಒಂದು ಸಾಧನವಾಗಿ ರುತ್ತದೆ. ಅದೇ ಸಮಯದಲ್ಲಿ, ಇದೇ ಪುಸ್ತಕದ ೬೩ ಮತ್ತು ೬೪ನೆಯ ಪುಟದಲ್ಲಿ ವಿವರಿಸಿರುವಂತೆ ಆಚಾರ್ಯರು ಸಾಕ್ಷಾತ್ ವೇಂಕಟೇಶನ ಅವತಾರ ಸ್ವರೂಪರಾದುದರಿಂದ ನಾವು ಹೊಂದಬೇಕಾದ ವಸ್ತುವಾಗಿ ಸಾಧ್ಯರಾಗಿದ್ದಾರೆ. ಆದುದರಿಂದಲೇ, ಆಚಾರ್ಯರು ಪ್ರಾಪ್ಯ ಮತ್ತು ಪ್ರಾಪಕರಾಗಿದ್ದಾರೆ ಎಂದು ಹೇಳಿದ್ದಾರೆ. ಈ ರೀತಿಯಾದ ಆಚಾರ್ಯರಿಗೆ ಮಂಗಳ ವುಂಟಾಗಲಿ— ಎಂದು ಈ ಶ್ಲೋಕದಲ್ಲಿ ಆಶಿಸಿದ್ದಾರೆ.

**ಯಃ ಕೃತಂ ವರದಾರ್ಯೇಣ ವೇದಾಂತಾಚಾರ್ಯಮಂಗಳಮ್ ||**
**ಆಶಾಸ್ತೇಽನುದಿನಂ ಸೋಽಪಿ ಭವೇನ್ಮಂಗಳ ಭಾಜನಮ್ ||೧೨||**

**ಯಃ** =ಯಾವನು, ವರದಾರ್ಯೇಣ= ವರದಾಚಾರ್ಯರಿಂದ, **ಕೃತಂ** =ರಚಿಸಲ್ಪಟ್ಟ **ವೇದಾಂತಾಚಾರ್ಯಮಂಗಳಂ**= ವೇದಾಂತಾಚಾರ್ಯರ-ಮಂಗಳ ಪದ್ಯಮಾಲಿಕೆಯನ್ನು, **ಅನುದಿನಂ**= ಪ್ರತಿನಿತ್ಯವೂ, **ಆಶಾಸ್ತೇ** =ಅನುಸಂಧಾನಮಾಡುತ್ತಾನೆಯೋ, **ಸೋಽಪಿ** = ಅವನಾದರೋ ಮಂಗಳ-**ಭಾಜನಮ್**= ಸರ್ವವಿಧವಾದ ಮಂಗಳಗಳಿಗೂ ಪಾತ್ರನಾಗಿ, **ಭವೇತ್**= ಆಗುತ್ತಾನೆ.

ಕುಮಾರ ವರದಾಚಾರ್ಯರು ಹಿಂದಿನ ೧೨ ಪದ್ಯಗಳಲ್ಲಿ ಆಚಾರ್ಯರಿಗೆ ಮಂಗಳವನ್ನು ಹಾಡಿ ಈ ಶ್ಲೋಕದಲ್ಲಿ ಅದಕ್ಕೆ ಫಲಶ್ರುತಿಯನ್ನು ಹೇಳಿರು-ತ್ತಾರೆ. ಯಾರು ಈ ಮಂಗಳ ಪದ್ಯಮಾಲಿಕೆಯನ್ನು ನಿರಂತರವಾಗಿ ಪ್ರತಿ-

ನಿತ್ಯವೂ ಅನುಸಂಧಾನಮಾಡಿ ಆಚಾರ್ಯರಿಗೆ ಮಂಗಳವನ್ನು ಹಾಡುತ್ತಾ-ರೆಯೋ, ಅವರಿಗೆ ಆಚಾರ್ಯರ ವಿಶೇಷಾನುಗ್ರಹವು ಲಭಿಸಿ, ಅವರ ಕೃಪಾ-ಕಟಾಕ್ಷದಿಂದ, 'ಮಂಗಳಾನಾಂ ಚ ಮಂಗಳಮ್' ಎಂದು ಹೇಳುವ ಪರ-ಮಾತ್ಮನ ಕೃಪಾಕಟಾಕ್ಷವು ಲಭಿಸಿ, ಅವನ ಮಂಗಳಮೂರ್ತಿಯ ಸಾಕ್ಷಾ-ತ್ಕಾರವಾಗುತ್ತದೆ. ಅಂದರೆ ಮಂಗಳಭಾಜನಾಗುತ್ತಾನೆ— ಎಂದು ಹೇಳಿದ್ದಾರೆ.

|| ಇಲ್ಲಿಗೆ ವೇದಾಂತದೇಶಿಕ ಮಂಗಳಾಶಾಸನವು ಮುಗಿದಿದೆ ||

— — —

## || ಶ್ರೀಮದ್ವೇದಾಂತದೇಶಿಕ ಪ್ರಾರ್ಥನಾಷ್ಟಕಮ್ ||

**ತ್ರಯೀಚೂಡಾಗುರೋ ಸ್ವಾಮಿನ್ ಕೃಪಾಂಭೋರಾಶಿನಾ ತ್ವಯಾ |**
**ವಿಜ್ಞಾಪನಂ ಮಾಮಕೀನಂ ಶ್ರೋತವ್ಯಂ ಶ್ರಿತವತ್ಸಲ ||೧||**

**ಶ್ರಿತವತ್ಸಲ**=ಆಶ್ರಿತಜನರಲ್ಲಿ ವಾತ್ಸಲ್ಯವುಳ್ಳ, **ತ್ರಯೀಚೂಡಾಗುರೋ**=ವೇದಾಂತಾಚಾರ್ಯ, **ಸ್ವಾಮಿನ್**=ಸ್ವಾಮಿಗಳೇ, **ಕೃಪಾಂಭೋರಾಶಿನಾ** =ದಯಾಸಾಗರರಾದ, **ತ್ವಯಾ**= ತಮ್ಮಿಂದ **ಮಾಮಕೀನಂ** =ನನ್ನ, **ವಿಜ್ಞಾಪನಂ**= ಪ್ರಾರ್ಥನೆಯು, **ಶ್ರೋತವ್ಯಂ** =ಕೇಳಲ್ಪಡಬೇಕು.

**ತ್ರಯ್ಯಂತಾರ್ಯ ಭವತ್ಪಾದಪಂಕೇರುಹಜುಷಾಂ ಸತಾಂ |**
**ಸ್ವಯಂ ಮಯಿ ಸದಾ ಭೂಯಾತ್ ಅನುಗ್ರಹಪರಂಪರಾ ||೨||**

**ತ್ರಯ್ಯಂತಾರ್ಯ**=ವೇದಾಂತಾಚಾರ್ಯರೇ, **ಭವತ್ಪಾದಪಂಕೇರುಹಜುಷಾಂ**=ತಮ್ಮ ಅಡಿದಾವರೆಯಲ್ಲಿ ಸೇವೆಸಲ್ಲಿಸುತ್ತಾ ಪ್ರೀತರಾದ, **ಸತಾಂ**= ಸತ್ಪುರುಷರ **ಅನುಗ್ರಹಪರಂಪರಾ**= ಅನುಗ್ರಹದ ಸಾಲಾದರೋ, **ಸ್ವಯಂ**=ತಾನಾಗಿಯೇ, **ಮಯಿ** =ನನ್ನಲ್ಲಿ, **ಸದಾ** =(ನಿರಂತರವಾಗಿ) ಎಲ್ಲ ಕಾಲದಲ್ಲಿಯೂ, **ಭೂಯಾತ್** =ಇರುವಂತಾಗಲಿ,

**ಶ್ರೀ ಸಂಯಮೀಂದ್ರಸಿದ್ಧಾಂತನಿಧಿರಕ್ಷೈಕದೀಕ್ಷಿತ ।**
**ನಿಯತಂ ಕುರ ದಾಸಂ ಮಾಂ ಸರ್ವತಂತ್ರಸ್ವತಂತ್ರ ತೇ ॥೩॥**

**ಶ್ರೀ ಸಂಯಮೀಂದ್ರಸಿದ್ಧಾಂತನಿಧಿರಕ್ಷೈಕದೀಕ್ಷಿತ** = ಭಗವಂತನ ನಿತ್ಯಕೈಂಕರ್ಯಶ್ರೀಯಿಂದ ಭೂಷಿತರಾದ ಯತಿರಾಜ (ರಾಮಾನುಜ)ರ ಸಿದ್ಧಾಂತ ನಿಧಿಯತಂತಿರುವ ಅವರ ಗ್ರಂಥಗಳನ್ನೂ ಮತ್ತು ಅವುಗಳಲ್ಲಿ ಪ್ರತಿಪಾದಿತವಾದ ಬೋಧನೆಯನ್ನೂ ರಕ್ಷಿಸುವ ಕೆಲಸವೊಂದರಲ್ಲಿಯೇ ದೀಕ್ಷಾಬದ್ಧರಾದ, (ಎಲೈ ಆಚಾರ್ಯರೇ !) **ಸರ್ವತಂತ್ರಸ್ವತಂತ್ರ** ='ಸರ್ವತಂತ್ರಸ್ವತಂತ್ರ'ರೆಂದು ಬಿರುದಾಂಕಿತರಾದ, **ತೇ**= ನಿಮ್ಮಲ್ಲಿ, **ಮಾಂ** =ನನ್ನನ್ನು, **ನಿಯತಂ**= ನಿಯಮೇನ, **ದಾಸಂಕುರು** =ದಾಸನಾಗಿರುವಂತೆಮಾಡಿ.

**ಜ್ಞಾನಭಕ್ತ್ಯಾದಿಸತ್ಸಂಪತ್ಪ್ರದಾಯಿನ್ಯಾನುಕಂಪಯಾ ।**
**ಸ್ಯಾದಸಾವಿತಿವೀಕ್ಷಸ್ವ ವೇದಾಂತಾಚಾರ್ಯವರ್ಯ ಮಾಂ ॥೪॥**

**ವೇದಾಂತಾಚಾರ್ಯವರ್ಯ** =ಎಲೈ ! ವೇದಾಂತಾಚಾರ್ಯರುಗಳಲ್ಲಿ ಶ್ರೇಷ್ಠರಾದದರೇ !, **ಜ್ಞಾನಭಕ್ತ್ಯಾದಿಸತ್ಸಂಪತ್ಪ್ರದಾಯಿನ್ಯಾ** =ಜ್ಞಾನಭಕ್ತಿಯೇ ಮೊದಲಾದ ಸತ್ಸಂಪ್ರದಾಯವನ್ನುಂಟುಮಾಡುವ **ಅನುಕಂಪಯಾ** ಕೃಪೆಯಿಂದ ತುಂಬಿದ, (ದೃಷ್ಟಿಯಿಂದ), **ಅಸೌ** =ಇವನು, **ಸ್ಯಾತ್** = (ಜ್ಞಾನಭಕ್ತಿಯೇ ಮೊದಲಾದ ಒಳ್ಳೆಯ ಸಂಪ್ರದಾಯದಿಂದ ಕೂಡಿ) **ಇರಲಿ, ಇತಿ** =ಎಂದು, **ಮಾಂ** =ನನ್ನನ್ನು, **ವೀಕ್ಷಸ್ವ**= ನೋಡಿ.

**ಶ್ರೀವೇಂಕಟೇಶಘಂಟಾತ್ಮನ್ ! ಯತೀಂದ್ರಶಠಜಿತ್ಪ್ರಿಯ ।**
**ರಹಸ್ಯತ್ರಯಸಾರೋಕ್ತನಿಷ್ಠಾಂ ಶ್ರೇಷ್ಠಾಂ ಪ್ರಯಚ್ಛ ಮೇ ॥೫॥**

**ಶ್ರೀವೇಂಕಟೇಶಘಂಟಾತ್ಮನ್** =ತಿರುಪತಿ ಶ್ರೀನಿವಾಸನ ಘಂಟಾರೂಪವನ್ನೇ ಆತ್ಮನಾಗಿಹೊಂದಿರುವವರೇ ! **ಯತೀಂದ್ರಶಠಜಿತ್ಪ್ರಿಯ** = ಭಗವದ್ರಾಮಾನುಜರು ಮತ್ತು ನಮ್ಮಾಳ್ವಾರ್‌ರವರ (ಕೃಪೆಗೆ ಪಾತ್ರರಾಗಿ) ಪ್ರಿಯರಾದವರೇ ! **ಶ್ರೇಷ್ಠಾಂ** =ಶ್ರೇಷ್ಠವಾದ, **ರಹಸ್ಯತ್ರಯಸಾರೋಕ್ತನಿಷ್ಠಾಂ** =(ತಮ್ಮ ಕೃತಿರತ್ನವಾದ) ರಹಸ್ಯತ್ರಯಸಾರ ಗ್ರಂಥದಲ್ಲಿ ತಮ್ಮಿಂದ

ಹೇಳಲ್ಪಟ್ಟಿರುವ (ಪ್ರಪನ್ನನ) ನಿಷ್ಠೆಯನ್ನು **ಮೇ** =ನನಗೆ, **ಪ್ರಯಚ್ಛ** = (ಅನುಗ್ರಹಿಸಿ) ಕೊಡಿ.

**ತ್ವತ್ಕೃತಿಷ್ವಾಗಮಾಂತಾರ್ಯ ಸಮ್ಯಕ್ಕೃತಪರಿಶ್ರಮೈಃ ।**
**ನಿತ್ಯಯೋಗೋ ಮಹಾಭಾಗೈಸ್ತ್ವದೇಕಾಂತಿಭಿರಸ್ತು ನಃ ॥೬॥**

**ತ್ವತ್ಕೃತಿಷು** =ತಮ್ಮಿಂದ ರಚಿಸಲ್ಪಟ್ಟ ಗ್ರಂಥಗಳಲ್ಲಿಯೂ, **ಆಗಮಾಂತಾರ್ಯಸಮ್ಯಕ್ಕೃತಪರಿಶ್ರಮೈಃ** =ವೇದಾಂತ ಅಥವಾ ಉಪನಿಷತ್ತುಗಳಲ್ಲಿ ಪ್ರತಿಪಾದ್ಯನಾದ ಪರಮಾತ್ಮನನ್ನು ಸಾಕ್ಷಾತ್ಕರಿಸುವುದರಲ್ಲಿ ಒಳ್ಳೆಯ ಪರಿಶ್ರಮವುಳ್ಳ, **ತ್ವದೇಕಾಂತಿಭಿಃ** =ನಿಮ್ಮಲ್ಲಿಯೇ ಪರಿಪೂರ್ಣವಾದ ಭಕ್ತಿಯಿಂದ ಕೂಡಿರುವ (ನಿಮ್ಮಿಂದ ಉಕ್ತವಾದ ರೀತಿಯಲ್ಲಿಯೇ ಅನುಷ್ಠಾನ ಮಾಡುತ್ತಿರುವ) **ಮಹಾಭಾಗೈಃ** =ಮಹಾತ್ಮರೊಡನೆ, **ನಃ** =ನಮಗೆ **ನಿತ್ಯಯೋಗಃ** =ನಿರಂತರವಾದ ಸಂಪರ್ಕವು, **ಅಸ್ತು**= ಇರಲಿ.

**ಕದಾಪಿ ಕ್ವಾಪಿ ಕೇನಾಪಿ ಕವಿತಾರ್ಕಿಕಸಿಂಹ ! ಮಾಮ್ ।**
**ಶ್ರೀಕಾಂತತತ್ಪರಾಚಾರ್ಯೇಷ್ವಪ್ರಸಕ್ತಾಗಸಂ ಕುರು ॥೭॥**

**ಕವಿತಾರ್ಕಿಕಸಿಂಹ** =ಎಲೈ ! ಕವಿತಾರ್ಕಿಕಸಿಂಹರೆಂದು ಬಿರುದಾಂಕಿತರಾದ ಆಚಾರ್ಯರೇ ! **ಮಾಂ** =ನನ್ನನ್ನು, **ಕದಾಪಿ** =ಯಾವಾಗಲೇ(ಆಗಲಿ, **ಕ್ವಾಪಿ** =ಎಲ್ಲಿಯೇ ಆಗಲಿ, **ಕೇನಾಪಿ** =ಯಾವಕಾರಣದಿಂದಲೇ ಆಗಲಿ, **ಶ್ರೀಕಾಂತತತ್ಪರಾಚಾರ್ಯೇಷು** = ಶ್ರಿಯಃಪತಿಯಾದ ಶ್ರೀಮನ್ನಾರಾಯಣ ಮತ್ತು ಅವನಲ್ಲಿಯೇ ನೆಟ್ಟಮನಸ್ಸುಳ್ಳ, ಅವನ ಭಕ್ತರಾದ ಆಚಾರ್ಯರುಗಳ ವಿಷಯದಲ್ಲಿ, **ಅಪ್ರಸಕ್ತ + ಆಗಸಂ**= ಅಪರಾಧವೆಸಗದಂತವನನ್ನಾಗಿ **ಕುರು** = ಮಾಡಿರಿ.

**ಶ್ರೀಮದ್ವೇಂಕಟನಾಥಾರ್ಯ ! ತ್ವದೀಯ ಚರಣದ್ವಯಮ್ ।**
**ಭವತ್ವತ್ರಪರತ್ರಾಪಿ ಮದೀಯಂ ಶರಣಂ ಸದಾ ॥೮॥**

**ಶ್ರೀಮದ್ವೇಂಕಟನಾಥಾರ್ಯ** = ಶ್ರೀಮದ್ವೇಂಕಟನಾಥಾಚಾರ್ಯರೇ ! **ಅತ್ರ** =(ಲೀಲಾವಿಭೂತಿಯೆಂದು ಹೇಳಲಾಗುವ) ಈ ಲೋಕದಲ್ಲಿಯೂ,

(ಮತ್ತು) ಪರತ್ರಾಪಿ = ದೇಹಾವಸಾನವಾದ ಬಳಿಕ (ನಿತ್ಯವಿಭೂತಿಯೆಂದು ಹೇಳಲಾಗುವ) ಶ್ರೀವೈಕುಂಠದಲ್ಲಿಯೂ, ತ್ವದೀಯ ಚರಣದ್ವಯವ್ = ತಮ್ಮ ತಿರುವಡಿಗಳೆರಡೂ, ಮದೀಯಂ = ನಮಗೆ, ಸದಾ = ಎಲ್ಲ ಕಾಲದಲ್ಲಿಯೂ, ಶರಣಂ = ಆಸರೆಯಾಗಿ, (ರಕ್ಷಕವಾಗಿ) ಭವತು = ಇರಲಿ.

**ಸಾದರಂ ವ್ಯಾಹರನ್ನೇತತ್ಪ್ರತ್ಯಹಂ ಪ್ರಾರ್ಥನಾಷ್ಟಕಮ್ ।**
**ವೇದಾಂತಾಚಾರ್ಯಪಾದಾಬ್ಜ ಭಕ್ತಿರತ್ನಾಕರೋ ಭವೇತ್ ॥೯॥**

ಏತತ್ =ಈ, ಪ್ರಾರ್ಥನಾಷ್ಟಕಂ = 'ಪ್ರಾರ್ಥನಾಷ್ಟಕ'ವೆಂಬ ಈ ಎಂಟು ಶ್ಲೋಕಗಳನ್ನು, ಸಾದರಂ = ಆದರದಿಂದ, ಪ್ರತ್ಯಹಂ = ಪ್ರತಿನಿತ್ಯವೂ, ವ್ಯಾಹರನ್ = ಅನುಸಂಧಾನಮಾಡುವವನು, ವೇದಾಂತಾಚಾರ್ಯಪಾದಾಬ್ಜಭಕ್ತಿರತ್ನಾಕರಃ = ವೇದಾಂತಾಚಾರ್ಯರ ಅಡಿದಾವರೆಗಳಲ್ಲಿ ಉತ್ಪನ್ನವಾಗುವ ಭಕ್ತಿಸಾಗರವೇ (ಮೂರ್ತಿವೆತ್ತಂತೆ), ಭವೇತ್ = ಆಗುತ್ತಾನೆ.

**ಜಯತಿ ಶ್ರುತಿಚೂಡಾರ್ಯಃ ಶ್ರೀಮಾನ್ ಅದ್ಭುತಚಂದ್ರಮಾಃ ।**
**ಸಕಲಾ ಯತ್ರ ಹಿ ಕಲಾಃ ನಿರ್ಮಲಾ ನಿತ್ಯಪುಷ್ಕಲಾಃ ॥೧೦॥**

ಯತ್ರ = ಯಾವ ಆಚಾರ್ಯರಲ್ಲಿ, ಸಕಲಾಃಕಲಾಃ = ೬೪ ಕಲೆಗಳೂ ನಿರ್ಮಲಾಃ = ಪರಿಶುದ್ಧವಾಗಿಯೂ (ಮಾಲಿನ್ಯರಹಿತವಾಗಿಯೂ) ನಿತ್ಯಪುಷ್ಕಲಾಃ = ನಿತ್ಯವೂ ಪೂರ್ಣಕಲೆಯಿಂದ ಪುಷ್ಟವಾಗಿ ಶೋಭಿಸುತ್ತಿವೆಯೋ, ಶ್ರೀಮಾನ್ = ಪರಮಾತ್ಮನ ಲೀಲಾವಿಭೂತಿ ಮತ್ತು ನಿತ್ಯವಿಭೂತಿ ಎರಡರಲ್ಲಿಯೂ ಭಗವಂತನ ನಿತ್ಯಕೈಂಕರ್ಯಶ್ರೀಯಿಂದ ಕೂಡಿದ್ದ, ಶ್ರುತಿಚೂಡಾರ್ಯಃ = ಆ ವೇದಾಂತಾಚಾರ್ಯರು, ಅದ್ಭುತಚಂದ್ರಮಾಃ = ಆಶ್ಚರ್ಯಕರನಾದ ಚಂದ್ರನಂತೆ, ಜಯತಿಹಿ = ಜಯಿಸುತ್ತಾರಲ್ಲವೇ ?

ಈ ಲೋಕದಲ್ಲಿ ಕಾಣುವ ಚಂದ್ರನಾದರೋ, ಕೃಷ್ಣಪಕ್ಷದಲ್ಲಿ ದಿನಕ್ಕೊಂದು ಕಲೆಯಂತೆ ಕ್ಷಯವಾಗುತ್ತಾ, ಅಮಾವಾಸ್ಯೆಯದಿನ ಪೂರ್ಣವಾಗಿ ಕಲಾಹೀನನಾಗಿ ಕಾಣುತ್ತಾನೆ. ಶುಕ್ಲಪಕ್ಷದಲ್ಲಿ ದಿನಕ್ಕೊಂದು ಕಲೆ

ಯಂತೆ ಅಭಿವೃದ್ಧನಾಗಿ ಹುಣ್ಣಿಮೆಯದಿನ ಕಲಾಪೂರ್ಣನಾಗಿ ಶೋಭಿಸ
ತ್ತಾನೆ. ಈ ರೀತಿ ತಿಂಗಳಿಗೊಂದು ದಿನ ಕಲಾಪೂರ್ಣನಾಗಿದ್ದರೂ, ಅ
ನನ್ನೇ ದಿಟ್ಟಿಸಿ ನೋಡಿದವರಿಗೆ ತಿಳಿಯುವಂತೆ, ಅವನ ಮಧ್ಯದಲ್ಲಿ ಜಿ
ಅಥವಾ ಮೊಲದ ಆಕಾರದಲ್ಲಿರುವ ಗುರುತೊಂದರಿಂದ ಕೂಡಿದ್ದಾ
ಅಂದರೆ ಒಟ್ಟಿನಲ್ಲಿ ಚಂದ್ರನು ನಿರಂತರವಾಗಿ ಸಕಲಕಲಾಪೂರ್ಣನ
ಶೋಭಿಸುವುದಿಲ್ಲ. ಮತ್ತು ನಿರ್ಮಲನಾಗಿಯೂ ಇರುವುದಿಲ್ಲ. ಈ ರ
ಇರುವ ಚಂದ್ರನೇ ತನ್ನ ಆಹ್ಲಾದದಾಯಕತ್ವಗುಣದಿಂದ ಲೋಕದಲ್ಲಿ ಎಲ್ಲ
ರನ್ನೂ ಜಯಿಸಿರುವಲ್ಲಿ ಯಾವ ನಮ್ಮ ಆಚಾರ್ಯರಾದರೋ, ತಾ
ಅಧಿಕರಿಸಿರುವ ೬೪ ಕಲಾಪಾಂಡಿತ್ಯದಲ್ಲಿ ಎಂದೂ ಸ್ವಲ್ಪವೂ ಕುಂದಿಲ್ಲ
ದಂತೆಯೂ ಮಾಲಿನ್ಯಹೀನರಾಗಿಯೂ ಶೋಭಿಸುತ್ತಿರುವುದರಿಂದಲೂ, ಲೀಲ
ವಿಭೂತಿ ಮತ್ತು ನಿತ್ಯವಿಭೂತಿ ಎರಡರಲ್ಲಿಯೂ ಭಗವಂತನ ಕೈಂಕರ್ಯ
ಶ್ರೀಯನ್ನು ಹೊಂದಿದವರಾಗಿರುವುದರಿಂದಲೂ ನಿರಂತರವಾಗಿ ಎಲ್ಲರನು
ತನ್ನ ವಶವಾಗಿಸಿಕೊಂಡು ಜಯಿಸುತ್ತಾರೆ. ಅಂದರೆ, ಆಚಾರ್ಯೋಪಾಸ
ಯನ್ನು ಮಾಡಿದವನಿಗೆ ಅವರ ಕೃಪಾಕಟಾಕ್ಷದಿಂದ, ಅವರ ಗ್ರಂಥಗಳನ
ಕಾಲಕ್ಷೇಪಮಾಡುವಂತೆ ಬುದ್ಧಿಕೊಟ್ಟು ಅದರಲ್ಲಿ ಪ್ರತಿಪಾದ್ಯವಾದ ಸರ್ವಕಲೆ
ಗಳನ್ನೂ, ಸರ್ವಕಲಾಪೂರ್ಣನಾದ ಪರಮಾತ್ಮನನ್ನೂ ಅರ್ಥಮಾಡಿಕೊಂ
ಅನುಭವಿಸುವಂತೆಮಾಡಿ ಆನಂದತುಂದಿಲರಾಗುವಂತೆಮಾಡಿ ಆಚಾರ್ಯ
ಚೇತನೋದ್ಧಾರ ಕ್ರಿಯೆಗೆ ಮನಸೋಲುವಂತೆಮಾಡಿ -- ಆಚಾರ್ಯರು ಎಲ್ಲ
ರನ್ನೂ ಜಯಿಸುತ್ತಾರೆ.

"ಇಲ್ಲಿಗೆ ವೇದಾಂತದೇಶಿಕ ಪ್ರಾರ್ಥನಾಷ್ಟಕವು ಮುಗಿದಿದೆ"

— — —

ಕವಿತಾರ್ಕಿಕಸಿಂಹಾಯ ಕಲ್ಯಾಣಗುಣಶಾಲಿನೇ ।
ಶ್ರೀಮತೇ ವೆಂಕಟೇಶಾಯ ವೇದಾಂತಗುರವೇ ನಮಃ ॥
ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥

॥ ಇತಿ ಶಮ್ ॥